(53)

# ಪಂಚಮ

ಸಂಪುಟ - 12
ಸಂಚಿಕೆ - 5
ಮಾರ್ಚ್ - 1
ಬೆಲೆ - 1 ರೂ.

ಕೊಡುಗೆ: ಚಂದ್ರಪ್ರಸಾದ್ ತ್ಯಾಗಿ. ಹಾಸನ.

ತತ್ತೂರು:

# ನ್ಯಾಯಾಂಗ ತನಿಖೆಗೆ ಆಗ್ರಹ

**ದಲಿತರ ಮೇಲಾಗುವ ದೌರ್ಜನ್ಯಗಳು ಹೇಗೆ ರಾಜಕೀಯ ಪಕ್ಷಗಳ ದಾಳವಾಗಬಲ್ಲವೆನ್ನಲು ತತ್ತೂರು ಪ್ರಕರಣ ಒಂದು ನಿದರ್ಶನ.**

**ಗ್ರಾಮಕ್ಕೆ ಭೇಟಿ ನೀಡಿದ್ದ ದ.ಸಂ.ಸ. ರಾಜ್ಯಕಾರ್ಯನಿರ್ವಾಹಕ ಸಮಿತಿ ಕಾಂಗ್ರೆಸ್, ಮತ್ತು ಜನತಾ ಪಕ್ಷಗಳ ಕೊಳೆತ ಮನಸ್ಸನ್ನು ಬಯಲಿಗಿಟ್ಟು, ನ್ಯಾಯಾಂಗ ತನಿಖೆಗೆ ಆಗ್ರಹ ಪಡಿಸಿದೆ.**

ತಾ|| 29-1-88 ರಂದು ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ತತ್ತೂರಿನಲ್ಲಿ ನಡೆಯಿತು ಎನ್ನಲಾದ ಘಟನೆಯ ಬಗ್ಗೆ ದ. ಸಂ. ಸ. ಶಿಕಾರಿಪುರ ಶಾಖೆ, ಶಿವಮೊಗ್ಗ ಜಿಲ್ಲಾ ಶಾಖೆ ಹಾಗೂ ರಾಜ್ಯ ಕಾರ್ಯನಿರ್ವಾಹಕ ಸಮಿತಿ ಸದಸ್ಯರು; ಸ್ಥಳಕ್ಕೆಭೇಟಿ ಕೊಟ್ಟು ಘಟನೆಯ ಸತ್ಯಾಸತ್ಯತೆಗಳನ್ನು ಅರಿಯಲು ತೀವ್ರ ಪ್ರಯತ್ನ ಮಾಡಿರುತ್ತೇವೆ. ಹಲ್ಲೆಗೆ ಒಳಗಾದ ಚಂದ್ರಪ್ಪ ಹಾಗೂ ಊರಿನ ಉಳಿದ ದಲಿತ ಬಂಧುಗಳನ್ನು ಮುಖತಃ ಭೇಟಿ ಮಾಡಿ ಚರ್ಚೆ ನಡೆಸಿ ಪರಿಸ್ಥಿತಿ ಅಭ್ಯಾಸ ಮಾಡಿದ ನಂತರ ನಮ್ಮ ತಿಳುವಳಿಕೆಗೆ ಬಂದ ವಿಚಾರಗಳನ್ನು ಸ್ಪಷ್ಟಪಡಿಸುತ್ತೇವೆ.

ಚಂದ್ರಪ್ಪ ತಾ|| 29-1-88ರ 6-30ರ ಸಮಯದಲ್ಲಿ ದೇವಸ್ಥಾನಕ್ಕೆ ಪೂಜೆ ಮಾಡಿಸಲು ಹೋಗಿದ್ದು ಪೂಜಾರಿ ಪೂಜೆ ಮಾಡಲು ನಿರಾಕರಿಸಿದ ಸಂದರ್ಭದಲ್ಲಿ ಅಲ್ಲಿಯೇ ಇದ್ದ ಮಂಡಲದ ಜನತಾ ಪಕ್ಷದ ಸದಸ್ಯ ರವಿಶಂಕರೇಗೌಡ ಮತ್ತು ಆತನ ಅನುಯಾಯಿಗಳು ಚಂದ್ರಪ್ಪನನ್ನು ಕಂಬಕ್ಕೆ ಕಟ್ಟಿಹಾಕಿ ಹೊಡೆದಿದ್ದು, ತಲೆಯ ಮೇಲೆ ನೀರು ಸುರಿದಿದ್ದು, ಮೆಟ್ಟನ್ನು ಬಾಯಿಯಲ್ಲಿ ತುರುಕಿದ್ದು, ಇವು ಸತ್ಯ ವಿಚಾರಗಳೆಂದು ಮನವರಿಕೆಯಾಗಿರುತ್ತದೆ. ಆದರೆ ಮಲವನ್ನು ಮೆಟ್ಟನಲ್ಲಿ ಹಾಕಿ ಚಂದ್ರಪ್ಪನಿಗೆ ಮಲವನ್ನು ತಿನ್ನಿಸಿದರು ಎಂಬ ಬಗ್ಗೆ ಅನೇಕ ಗೊಂದಲಗಳು ಉದ್ಭವಿಸಿವೆ. ಚಂದ್ರಪ್ಪ ತನ್ನನ್ನು ಭೇಟಿಮಾಡಿದ ದ. ಸಂ. ಸ ಕಾರ್ಯಕರ್ತರ ಮುಂದೆ ಮಲ ತಿನ್ನಿಸಿದರು ಎನ್ನುತ್ತಾನೆ. ಆದರೆ ಆತ ಪೊಲೀಸಿಗೆ ಕೊಟ್ಟದೂರಿನಲ್ಲಿ ಮಲ ತಿನ್ನಿಸಲು ಪ್ರಯತ್ನ ಪಟ್ಟರೆಂದು ಬರೆಸಿರುತ್ತಾನೆ, ತತ್ತೂರಿನ ಮಂಡಲ ಪ್ರಧಾನರಿಗೆ ಕೊಟ್ಟ ದೂರಿನಲ್ಲಿ, "ಮಲವನ್ನು ತಿನ್ನು ಎಂದು ಬಲವಂತ ಮಾಡುತ್ತಿದ್ದರು" ಎಂದು ಹೇಳಿರುತ್ತಾನೆ. ತತ್ತೂರಿನ ಮಂಡಲ ಪ್ರಧಾನ ದ. ಸಂ. ಸ. ಸಾಗರಶಾಖೆಗೆ ಬರೆದ ಪತ್ರದಲ್ಲಿ (ಈತ ಕಾಂಗ್ರೆಸ್ ಪಕ್ಷಕ್ಕೆ ಸೇರಿದವನು ) "ಕಡ್ಡಿಯಿಂದ ಹೇಸಿಗೆಯನ್ನು ತಿನ್ನಲು ಒತ್ತಾಯಿಸಿದ್ದಲ್ಲದೆ ಚಪ್ಪಲಿಯನ್ನು ಬಾಯಿಗೆ ತುರುಕಿದ ವಿಷಯವನ್ನು ಪತ್ರ್ಯಕ್ಷವಾಗಿ ಬಾರು ಗುತ್ಯಪ್ಪ ಮತ್ತು ಸುಭಾಷ್ ಚಂದ್ರ ನೋಡಿತ್ತಾರೆ" ಎಂದು ತಿಳಿಸಿರುತ್ತಾರೆ. ಇದರಿಂದ ವಸ್ತುಸ್ಥಿತಿ ಗೊಂದಲ ಮಯವಾಗಿದೆ. ಸತ್ಯವನ್ನು ಸ್ಥಾಪಿಸಲು ಸರ್ಕಾರ ಈ ಕೂಡಲೆ ನ್ಯಾಯಾಂಗ ತನಿಖೆಯನ್ನು ನಡೆಸಬೇಕೆಂದು ದ. ಸಂ. ಸ. ತೀವ್ರವಾಗಿ ಒತ್ತಾಯಿಸುತ್ತದೆ.

ಚಂದ್ರಪ್ಪನ ಮೇಲೆ ಹಲ್ಲೆ ನಡೆಸಿರುವ ರವಿಶಂಕರೇಗೌಡ, ಗ್ರಾಮದ ಅತಿದೊಡ್ಡ ಭೂಮಾಲಿಕನೂ ಜನತಾಪಕ್ಷದ ಸದಸ್ಯನೂ ಆಗಿದ್ದು, ದಬ್ಬಾಳಿಕೆ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿರುವ ವ್ಯಕ್ತಿಯಾಗಿರುತ್ತಾನೆ. ಈತನ ದಬ್ಬಾಳಿಕೆಗೆ ತತ್ತರಿಸಿ, ಅನೇಕ ಕುಟುಂಬಗಳು ಹಿಂಸೆ ಅನುಭವಿಸಿ ಊರುಬಿಟ್ಟಿರುತ್ತಾರೆ ಎಂದು ತಿಳಿದು ಬಂದಿದೆ. ಈತನ ಮನೆಯಲ್ಲಿ ಇಂದಿಗೂ ದಲಿತರು ಜೀತ ಮತ್ತು ಕೂಲಿ ಮಾಡುತ್ತಿದ್ದಾರೆ. ಆದ್ದರಿಂದ ಸರ್ಕಾರ ಸಮಾಜ ವಿರೋಧಿ ರವಿಶಂಕರೇಗೌಡ ಹಾಗೂ ಆತನ ಬೆಂಬಲಿಗರ ಮೇಲೆ ಗೂಂಡಾಕಾಯಿದೆ ಅನ್ವಯ ಬಂಧಿಸಿ [illegible] ತೆಗೆದುಕೊಳ್ಳಬೇಕೆಂದು ದ.ಸಂ.ಸ. ಒತ್ತಾಯಿಸುತ್ತದೆ.

—ಬಿ. ವಿ. ಚಂದ್ರಪ್ರಸಾದ್ ತ್ಯಾಗಿ
ದ. ಸಂ. ಸ. ರಾಜ್ಯ ಸಂಚಾಲಕ

## ಸರ್ಜಾಪುರ ಬಂದ್: ದಲಿತರಲ್ಲಿ ಹೊಸ ಜಾಗೃತಿ

ಇವರು ಎಂದಿನಂತೆ 6.2.88 ರ ಮುಂಜಾನೆ ಪತ್ರಿಕೆ ಮೇಲೆ ಕಣ್ಣಾಡಿಸಿದರು. ತತ್ತೂರಿನಲ್ಲಿ ದಲಿತ ಚಂದ್ರಪ್ಪನಿಗೆ ಬಾಯಿಗೆ ಮಲದ ಚಪ್ಪಲಿ ಇಟ್ಟ ಪ್ರಕರಣ ಕಂಡಿತು. ಈ ಊರಿನಲ್ಲಿ ದ.ಸಂ. ಸ. ಶಾಖೆಯೇನೂ ಪ್ರಾರಂಭವಾಗಿರಲಿಲ್ಲ. ಆದರೆ ಬೆಂಡಿಗೇರಿ ರ್‍ಯಾಲಿಗೆ ಬಂದು ಓಡಾಡಿದ ಕಾಲುಗಳು ಸುಮ್ಮನಿರಗೊಡಲಿಲ್ಲ. ತತ್ತೂರು ಬೆಂಡಿಗೇರಿಯಾಗಾಯಕ್ಕೆ ಉಪ್ಪುಸವರಿತ್ತು. ರವರವ ಉರಿ ಎದೆತುಂಬ ತುಂಬಿಕೊಂಡ ವೆಂಕಟಸ್ವಾಮಿ, ಜಯರಾಂ, ವಸಂತ ಮೋಹನ್‌ಪ್ರಸಾದ್, ಶಂಬಯ್ಯ ಮುಂತಾದ ಯುವಕರು ಕೇರಿಯಲ್ಲೊಂದು ಸಭೆ ಕರೆದರು.

ಕಾರ್ಮಿಕರು, ಕೂಲಿಗಾರರು, ಯುವಕರು ಎಲ್ಲಾ ಸೇರಿದ್ದ ಆ ಸಭೆಯಲ್ಲಿ ಈ ಹೇಯಕೃತ್ಯಕ್ಕೆ ಪ್ರತಿಭಟನೆ ಸೂಚಿಸಲು 16-2-88 ರಂದು ಸರ್ಜಾಪುರ ಬಂದ್ ಮಾಡಲು ತೀರ್ಮಾನಿಸಲಾಯಿತು.

ಸಾಮಾನ್ಯವಾಗಿ ಬಂದ್ ಆಚರಿಸುವವರು ಪ್ರತಿಭಟನೆಯ ನೆಪದಲ್ಲಿ ಜನರಿಗೆ ತೊಂದರೆಕೊಡುವುದು ಸಹಜವೆ ಆದರೆ ಈ ವಿವೇಕವಂತ ಯುವಕರು ಆಸ್ಪತ್ರೆ, ಔಷಧಿಅಂಗಡಿ ಅಂಚೆಕಛೇರಿ, ವಿದ್ಯುಚ್ಛಕ್ತಿ ಕಛೇರಿಗಳನ್ನು ಬಿಟ್ಟು ಉಳಿದಂತೆ ಬಂದ್ ಆಚರಿಸಿದರು.

ಬಂದ್ ಸಂಪೂರ್ಣ ಯಶಸ್ವಿ ಆಯಿತು. ಸರ್ಕಾರಿ ಖಾಸಗಿ ಬಸ್ಸುಗಳು ಊರಿನ ಒಳಬಾಗಕ್ಕೆ ಬರಲಿಲ್ಲ ಅಂಗಡಿ ಮುಂಗಟ್ಟುಗಳನ್ನು ಪೂರ್ತಿ ಮುಚ್ಚಿದ ಸಾರ್ವಜನಿಕರೂ ದಲಿತರ ಕರೆಗೆ ದನಿಗೂಡಿಸಿದರು.

ಬಂದ್ ಪ್ರಯುಕ್ತ ಗೋಡೆಬರಹ ಬರೆಯಲಾಯಿತು. ದಲಿತರ ಮೇಲೆ ನಡೆಯುತ್ತಿರುವ ಈ ಘೋರ ಸ್ವರೂಪದ ದೌರ್ಜನ್ಯಗಳ ವಿರುದ್ಧ ಕ್ರಮ ಕೈಗೊಳ್ಳದ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯ ಪ್ರತಿಕೃತಿ ದಹನ ಮಾಡಲಾಯಿತು.

ಸರ್ಜಾಪುರದ ದಲಿತರು ಸ್ವಯಂ ಸ್ಫೂರ್ತಿಯಿಂದ ತುಡಿದು ತಮ್ಮನ್ನು ತಾವೇ ಸಂಘಟಿಸಿಕೊಂಡು ವಿನೂತನ ರೀತಿಯಲ್ಲಿ ದ.ಸಂ.ಸ ಶಾಖೆ ಆರಂಭಿಸಿಕೊಂಡರು.

## ಬಗೆಹರಿದ ರಿಡ್ಲ್ಸ್ ಬಿಕ್ಕಟ್ಟು:

# ದಲಿತ ಸಮಾವೇಶಕ್ಕೆ ಸಂದ ಜಯ

**ದೇಶದಾದ್ಯಂತ ವೈಚಾರಿಕ ಅಲೆಗಳನ್ನೆಬ್ಬಿಸಿ ದಲಿತರಲ್ಲಿ ಎಚ್ಚರದ ಕಿಡಿ ಹೊತ್ತಿಸಿದ ಡಾ॥ ಅಂಬೇಡ್ಕರ್ 'ರಾಮಾ ಮತ್ತು ಕೃಷ್ಣ' ಅಧ್ಯಾಯದ ಬಿಕ್ಕಟ್ಟು ಬಗೆಹರಿದಿದೆ. ಈ ಅಧ್ಯಾಯವನ್ನು ಹಾಗೆಯೇ ಉಳಿಸಿ 'ಲೇಖಕರ ಅಭಿಪ್ರಾಯ ಲೇಖಕರದೇ ಹೊರತು ಸರ್ಕಾರದ್ದಲ್ಲ' ಎಂದು ಸ್ಪಷ್ಟಪಡಿಸಿ ಬಿಡುಗಡೆ ಮಾಡಲು ಮಹಾರಾಷ್ಟ್ರ ಸರ್ಕಾರ ಒಪ್ಪಿಕೊಂಡಿತು. ಇದಕ್ಕೆ ಕಾರಣವಾದದ್ದು ಫೆ. 5ರ ದಲಿತರ ಬೃಹತ್ ರ್‍ಯಾಲಿ ಭಾಗವಹಿಸಿ ಬಂದ ಬಸಣ್ಣ ಸಿಂಘೆಯವರ ಪ್ರತ್ಯಕ್ಷ ವರದಿ.**

ಡಾ॥ ಬಾಬಾ ಸಾಹೇಬ ಅಂಬೇಡ್ಕರರು ಬರೆದ "ರಿಡಲ್ಸ್ ಆಫ್ ಹಿಂದೂ ಇಸಂ" ಗ್ರಂಥದ "ರಾಮಕೃಷ್ಣ" ಭಾಗವನ್ನು ತೆಗೆದು ಹಾಕಿದ ಮಹಾರಾಷ್ಟ್ರ ಸರಕಾರದ ನೀತಿಯನ್ನು ವಿರೋಧಿಸಿ ದಿನಾಂಕ 5–2–1988 ರಂದು ಮಹಾರಾಷ್ಟ್ರದ ರಾಜಧಾನಿಯಾದ ಬೊಂಬಾಯಿಯಲ್ಲಿ ಲಕ್ಷಾಂತರ ಜನ ದಲಿತರು ಸೇರಿ ಸರಕಾರದ ನೀತಿಯನ್ನು ಪ್ರತಿಭಟಿಸಿದರು.

ತಮ್ಮ ನಾಯಕನು ಬರೆದ ಗ್ರಂಥದ ಒಂದೇ ಒಂದು ಅಕ್ಷರವೂ ಸಹ ಸರಕಾರ ತೆಗೆದು ಹಾಕ ಕೂಡದು, ಇದ್ದಕ್ಕಿದ್ದಂತೆ ಪೂರ್ಣವಾಗಿ ಪ್ರಕಟಿಸಬೇಕೆಂಬುದು ದಲಿತರ ಪ್ರಮುಖ ಬೇಡಿಕೆಯಾಗಿತ್ತು.

ಮಹಾರಾಷ್ಟ್ರದಲ್ಲಿಯ ಅಂಬೇಡ್ಕರರ ಅನುಯಾಯಿಗಳು ಹರಿದು ಹಂಚಿಹೋಗಿ ತಮ್ಮ ತಮ್ಮದೆಯಾದ ಅನೇಕ ಸಣ್ಣ ಪುಟ್ಟ ಸಂಘ ಸಂಸ್ಥೆಗಳನ್ನು ಪಕ್ಷಗಳನ್ನು ಕಟ್ಟಿಕೊಂಡು ಬೇರೆ ಬೇರೆಯಾಗಿ ಹೋರಾಡುತ್ತಿದ್ದರು. ಆದರೆ ಈಗಿನ ರಿಡಲ್ಸ್ ಪ್ರಕರಣದ ಸಂಬಂಧದಲ್ಲಿ ಎಲ್ಲ ಸಂಘ ಸಂಸ್ಥೆಗಳು ಒಂದೇ ವೇದಿಕೆಯ ಅಡಿಯಲ್ಲಿ ಒಂದಾಗಿ ಸರಕಾರ ಜಾತ್ಯಾಂಧರ ಒತ್ತಾಯಕ್ಕೆ ಮಣಿದಿದ್ದನ್ನು ಗಮನಿಸಿ ಸಂಘಟಿತರಾದರು. ಸಂಯುಕ್ತ ಹೋರಾಟ ಮಾಡಲು ಡಾ॥ ಅಂಬೇಡ್ಕರರ ವಿಚಾರ ಸಂವರ್ಧಕ ಸಮಿತಿ" ರಚಿಸಿ ಡಿ. 5–2–1988 ರಂದು ಐದು ಲಕ್ಷ ದಲಿತರ ಬೃಹತ್ ಪ್ರತಿಭಟನೆ ಮಾಡುವುದಾಗಿ ಸಂಘಟನೆಕಾರರು ಸರಕಾರಕ್ಕೆ ಎಚ್ಚರಿಕೆ ನೀಡಿದರು.

"ಡಾ॥ ಅಂಬೇಡ್ಕರ್ ವಿಚಾರ ಸಂವರ್ಧಕ ಸಮಿತಿ"ಯು ಕೊಟ್ಟ ಈ ಕರೆಗೆ ಬಂದು ಸೇರಲು ಮಹಾರಾಷ್ಟ್ರದ ಎಲ್ಲಾ ಜಿಲ್ಲಾ ಕೇಂದ್ರಗಳಿಂದಲೂ ರೈಲಿನಿಂದ, ಬಸ್ಸಿನಿಂದ, ಟ್ರಾಕ್ಟರ್‌ಗಳಿಂದಲೂ ದಿನಾಂಕ 4–2-1988 ರಿಂದಲೇ ದಲಿತರ ಮಹಾಪೂರ ಬೊಂಬಾಯಿಗೆ ಧಾವಿಸಲು ಪ್ರಾರಂಭವಾಯಿತು. ಬಂದು ದಲಿತರೆಲ್ಲ ಬೊಂಬಾಯಿ ವಸತಿಗಳಲ್ಲಿದ್ದ ಎಲ್ಲ ಬೌದ್ಧ ವಿಹಾರಗಳಲ್ಲಿ, ಕಮ್ಯೂನಿಟಿ ಹಾಲ್‌ಗಳಲ್ಲಿ, ವಿದ್ಯಾರ್ಥಿ ನಿಲಯಗಳಲ್ಲಿ, ವಸತಿ ಗೃಹಗಳಲ್ಲಿ, ರೈಲ್ವೇ ಸ್ಟೇಷನ್‌ಗಳಲ್ಲಿ, ಬಸ್ ನಿಲ್ದಾಣಗಳಲ್ಲಿ ಮತ್ತು ಡಾ॥ ಅಂಬೇಡ್ಕರವರ ಸಮಾಧಿಯಾದ ಚೈತ್ರ [illegible] ಜನ ದಂಡಯಾತ್ರೆಗೆ ಬಂದಂತೆ ಬಂದು ತಂಗಿದರು. ಜೊತೆಗೆ ತಂದ ತಮ್ಮ ರೊಟ್ಟಿಯ ಗಂಟನ್ನು ಬಿಚ್ಚಿ ಉಂಡು ಮರುದಿನದ ಹೋರಾಟದಲ್ಲಿ ಪಾಲ್ಗೊಳ್ಳಲು ಸಜ್ಜಾದರು.

5–2-1988ರ ಮುಂಜಾನೆಯಿಂದಲೂ ಬೊಂಬಾಯಿಯ ಎಲ್ಲಾ ರಸ್ತೆಗಳಿಂದಲೂ ನೀಲಿ ಧ್ವಜ ಹಿಡಿದು, ದಲಿತರ ದಂಡು ಬಂದು ಸೇರುತ್ತಲಿತ್ತು. ಇಡೀ ಬೊಂಬಾಯಿಯ ತುಂಬಾ ಎಲ್ಲೆಂದರಲ್ಲಿ ನೀಲಿ ಧ್ವಜ ಹಿಡಿದ ಹಿಂಡು ಹಿಂಡು ಮುಂಬೈ ತುಂಬ ಆವರಿಸಿತ್ತು. ಸಾವಿರಾರು ಟ್ರಕ್ಕುಗಳು, ನೂರಾರು ಟೆಂಪೋ,ಕಾರು, ಜೀಪುಗಳಲ್ಲಿ ಹೆಣ್ಣು ಮಕ್ಕಳು, ಮುದುಕರು ಮೊದಲು ಮಾಡಿ ಕುಳಿತಲ್ಲಿಂದಲೇ ಜೈಕಾರ ಹಾಕುತ್ತಿರುವುದನ್ನು ನೋಡಿದವರಿಗೆ ರೋಮಾಂಚನವಾಗುತ್ತಿತ್ತು.

'ಗರ್ವಸೇ ಕಹೋ : ಹಮ್ ಭಾರತೀಯ ಹೈ, ಜೋರ್ ಸೇ ಕಹೋ : ಹಮ್ ಭಾರತೀಯ ಹೈ, ಹಮಾರ್ ಮಾಂಗ್ ಪೂರಿ ಕರೊ ನಹೀತೋ : ಕುರ್ಚಿ ಖಾಲಿ ಕರೋ', 'ಅಂಬೇಡ್ಕರ್ ಜಿಂದಾಬಾದ್, ಜಿಂದಾಬಾದ್, ದಲಿತ ಕ್ರಾಂತಿ : ವಿಜಯ ಅಸೋ' ಎಂದು ಪ್ರದರ್ಶನಕಾರರು ಮುಗಿಲು ಮುಟ್ಟುವಂತೆ ಘೋಷಣೆಗಳನ್ನು ಕೂಗುತ್ತಿದ್ದರು. ಅಂದಿನ ಜನಸಾಗರವನ್ನು ನೋಡಿದರೆ ಮುಂಬೈ ನಗರವನ್ನು ತಬ್ಬಿಕೊಂಡಿರುವ ಅರಬ್ಬಿ ಸಮುದ್ರವೇ ಉಕ್ಕಿ ತನ್ನ ತೆರೆಗಳನ್ನು ಚೆಲ್ಲಿದೆಯೋ ಎನಿಸುವಂತಿತ್ತು. ಸಮುದ್ರದ ತೆರೆಗಳಂತೆಯೇ ಜನಸಾಗರದ ಅಲೆಗಳು ಮುಂಬೈ ನಗರದ ರಸ್ತೆಗಳ ಮೇಲೆ ತ್ಯಾಪಾಡುತ್ತಿದ್ದುವು.

ಕನಿಷ್ಠ ಪಕ್ಷ ಏನಿಲ್ಲವೆಂದರೂ 10 ರಿಂದ 15 ಲಕ್ಷ ಜನ ದಲಿತರು ಸಾವಿರಾರು ನದಿಗಳಾಗಿ ಬಂದು ಮುಂಬೈ ನಗರವನ್ನು ತಮ್ಮ ಪಾದಗಳಿಂದ ಮುಚ್ಚಿಹಾಕಿದರು.

ಈ ಬೃಹತ್ ಪ್ರಮಾಣದ ಹೋರಾಟದಲ್ಲಿ ಸಾವಿರಾರು ಮೈಲುಗಳಿಂದ ಅಶಿಕ್ಷಿತ ಹಣ್ಣು ಹಣ್ಣು ಮುದುಕಿಯರು ತಮ್ಮ ಊಟದ ಗಂಟನ್ನು ಹೆಗಲಿಗೇರಿಸಿಕೊಂಡು ಬೊಂಬಾಯಿಯ ಸುಡುಬಿಸಿಲಿನ ಕರಿ ಡಾಂಬರು ರಸ್ತೆಯಲ್ಲಿ ಬರಿಗಾಲಿನಲ್ಲೇ ನಡೆಯುತ್ತ ತಮ್ಮ ನಾಯಕನ ಗ್ರಂಥವನ್ನು ಓದದಿದ್ದರೂ ಅದನ್ನು ಪ್ರತಿಭಟಿಸಲು ಉತ್ಸಾಹದಿಂದ ಸಿಟ್ಟಿನಿಂದ ತಮ್ಮ ರೊಚ್ಚನ್ನು ಹೊಟ್ಟೆಯಲ್ಲಿ ತುಂಬಿಕೊಂಡು ಬಂದಿದ್ದರು. ಅವರ ಸ್ಥಿತಿಯನ್ನು ಕಂಡ ಎಂತಹ ಅಳ್ಳೆದೆಯವನಿಗೂ ಧೈರ್ಯ ಬರುವಂತಿತ್ತು. ತಮ್ಮ ಬಡತನ, ದಾರಿದ್ರ್ಯ, ಅನಕ್ಷರತೆಯೆಲ್ಲವನ್ನು ಸಹಿಸಿಕೊಂಡು ತಮ್ಮ ನಾಯಕನ ಗ್ರಂಥನ ವಿಷಯವನ್ನು ಗಮನಿಸಿದ ಈ ಸ್ವಾಭಿಮಾನಿ ಮುಗ್ಧ ದಲಿತರು ಪ್ರತಿಭಟಿಸಲು ಸಾವಿರಾರು ಮೈಲುಗಳಿಂದ ಬಂದು ಬೃಹತ್ ಪ್ರಮಾಣದಲ್ಲಿ ಸಮಾವೇಶಗೊಂಡಿದ್ದರು.

ಏಕಾ ಏಕಿ ಒಂದು ಗ್ರಂಥದ ವಿವಾದದಿಂದಾಗಿ ಒಂದು ಜನವರ್ಗ ಲಕ್ಷಾವಧಿ ಸಂಖ್ಯೆಯಲ್ಲಿ ಬಂದು ಸೇರಿ ಒಂದುಗೂಡಿದ ಸಂಗತಿಯನ್ನು ಮಹಾರಾಷ್ಟ್ರದ ಜಾತ್ಯಾಂಧರಿಗೆ ಸಹಿಸುವುದು ಆಗುತ್ತಿಲ್ಲ. ವಿಶೇಷವಾಗಿ ಬೊಂಬಾಯಿಯ ಪಾಳೆಯಗಾರನಂತೆ ವರ್ತಿಸುವ ಶಿವಸೇನೆಯ ಬಾಳಾ ಠಾಕರೆ ಮತ್ತು ವನ ಮಾಂಡಲಿಕರಿಗೆ ಈ ದಲಿತರ ದಂಡು ಕಂಡು ಹೊಟ್ಟೆ ಉರಿಯುತ್ತಿದೆ. ಅದಕ್ಕಾಗಿಯೇ ದಲಿತರ ಓಣಿಗಳಲ್ಲಿ, ಹಾಸ್ಟೆಲುಗಳಲ್ಲಿ ದೊಂಬಿ ಮಾಡಲು ಪ್ರಚೋದಿಸುತ್ತಿದ್ದಾರೆ. ಈ ಸುದ್ದಿಗಾರ 6-2-1988ರಂದು ಬೊಂಬಾಯಿಯ ವಡಾಳದಲ್ಲಿದ್ದ ಸಿದ್ಧಾರ್ಥ ವಿಹಾರದಲ್ಲಿ ದಲಿತ ಪ್ಯಾಂಥರ್ಸ್ ನಾಯಕರೊಂದಿಗೆ ಚರ್ಚೆ ಮಾಡುತ್ತಿರುವಾಗಲೇ ಕಾವಲಿದ್ದ ಪೊಲೀಸರನ್ನು ಲೆಕ್ಕಿಸದೆ ಶಿವಸೇನೆಯ ಸದಸ್ಯರೆನ್ನಲಾದ ಎಳೆಂಟು ಜನ ಬಂದು ಸೋಡಾ ಬಾಟಲಿಗಳನ್ನು ಒಡೆದು ಗಾಜು ಕಿಡಕಿಗಳನ್ನು ಒಡೆದರು. ಇದನ್ನು ಗಮನಿಸಿದ ಅಲ್ಲಿಯೇ ಇದ್ದ ಪ್ಯಾಂಥರ್ಸ್ ನಾಯಕರಾದ ರಾಮದಾಸ್ ಅಟ್‌ವಾಲೆ, ಗಂಗಾಧರ ಗಾಡೆ, ರತನಕುಮಾರ ಪಾಟಲಿ ಪುತ್ರ ಪೊಲೀಸರ ನೆರವು ಪಡೆದು ಆಗುವ ಹೆಚ್ಚಿನ ಅನಾಹುತವನ್ನು ತಪ್ಪಿಸಿದರು.

ಮೇಲ್ನೋಟಕ್ಕೆ ಈಗ ಪರಿಸ್ಥಿತಿ ಸ್ವಲ್ಪ ಶಾಂತತೆಯಿಂದ ಕಂಡುಬಂದಿದ್ದರೂ ಬೊಂಬಾಯಿಯಲ್ಲಿನ ಶಿವಸೇನೆ ಮತ್ತು ಮತೀಯ ಸಂಸ್ಥೆಗಳು ತಮ್ಮ ಉಡಿಯಲ್ಲಿ ಬೆಂಕಿಯನ್ನು ಕಟ್ಟಿಕೊಂಡಿವೆ. ಯಾವಾಗ ಎಲ್ಲಿ ಇದನ್ನು ಚೆಲ್ಲಿ ಬೆಂಕಿ ಇಡುತ್ತಾರೋ ಗೊತ್ತಿಲ್ಲ. ಅಥವಾ ಅದರ ಉರಿಗೆ ಅವರೇ ಸುಟ್ಟು ಹೋಗುತ್ತಾರೋ ನೋಡಬೇಕು.

**• ಬಸಣ್ಣ ಸಿಂಘೆ**

## ದಲಿತ ನೇತಾರರ ಎಚ್ಚರಿಕೆ:

# ನಾವು ಮುಷ್ಠಿ ಬಿಚ್ಚಿದರೆ.....

ರಿಡಲ್ಸ್ ಹೋರಾಟ ತಾಲೂಕಿನಿಂದ ಜಿಲ್ಲೆಗೆ ಬಂದು ಈಗ ಮಹಾರಾಷ್ಟ್ರಕ್ಕಷ್ಟೆ ಸೀಮಿತವಾಗಿ ಉಳಿದಿಲ್ಲ ಈ ಹೋರಾಟ. ಈ ಹೋರಾಟವನ್ನು ರಾಷ್ಟ್ರದ ರಾಜಧಾನಿಯವರೆಗೂ ತೆಗೆದುಕೊಂಡು ಹೋಗಬೇಕಾಗುತ್ತದೆಂದು ಭಾರತೀಯ ರಿಪಬ್ಲಿಕನ್ ಪಕ್ಷದ ಅಧ್ಯಕ್ಷರಾದ, ಶ್ರೀ ಪ್ರಕಾಶ್ ಅಂಬೇಡ್ಕರ್ ಎಚ್ಚರಿಸಿದರು. ಮಹಾರಾಷ್ಟ್ರದ ರಾಜಧಾನಿಯಾದ ಮುಂಬೈಯಲ್ಲಿ ಡಾ॥ ಅಂಬೇಡ್ಕರ್ ವಿಚಾರ ಸಂವರ್ಧಕ ಸಮಿತಿಯು ಏರ್ಪಡಿಸಿದ ದಲಿತರ ಬೃಹತ್ ಸಮಾವೇಶದಲ್ಲಿ ಅವರು ಮಾತನಾಡುತ್ತಿದ್ದರು. 'ರಿಡಲ್ಸ್ ಆಫ್ ರಾಮ್ ಆ್ಯಂಡ್ ಕೃಷ್ಣ' ಈ ಭಾಗವನ್ನು ಇದ್ದಂತೆಯೇ ಉಳಿಸಿ ಪ್ರಕಟಿಸಬೇಕೆಂದು ಒತ್ತಾಯಿಸಿದರು ಮುಂದುವರೆದ ಅವರು ಅಂಬೇಡ್ಕರ್ ರಚಿಸಿದ ಗ್ರಂಥದಲ್ಲಿಯ ಒಂದೇ ಒಂದು ಅಕ್ಷರವನ್ನೂ ಸಹ ಕಿತ್ತು ಹಾಕಕೂಡದು, ಮಂಡಲ ಆಯೋಗದ ವರದಿಯೂ ಈ ಕೂಡಲೆ ಜಾರಿಯಾಗಬೇಕು. ದಲಿತರಿಗೆ ಸಿಗುವ ಮೀಸಲಾತಿ ಸೌಲಭ್ಯಗಳು ಮುಂದುವರಿಯಬೇಕು. ಅವುಗಳನ್ನು ವಿರೋಧಿಸುವ ಜಾತ್ಯಾಂಧ ಶಕ್ತಿಗಳು, ಸಂಘಟನೆಗಳ ಬಗ್ಗೆ ಅಂಬೇಡ್ಕರರ ಅನುಯಾಯಿಗಳು ಅರಿತು ಮುನ್ನಡೆಯಬೇಕೆಂದರು. ಅದಕ್ಕಾಗಿ ಅಂಬೇಡ್ಕರ್ ಅನುಯಾಯಿಗಳಲ್ಲಿರುವ ಆಂತರಿಕ ಒಳಬೇಧಗಳನ್ನು, ಗುಂಪುಗಾರಿಕೆಗಳನ್ನು, ಅಲ್ಪ ಮತಭೇದಗಳನ್ನು ತೊರೆದು ಎಲ್ಲರೂ ಒಂದೇ ವೇದಿಕೆಯನ್ನು ರಚಿಸಿ ಸಂಘಟಿತ ಹೋರಾಟ ಮಾಡಬೇಕೆಂದು ನುಡಿದರು. ರಿಡಲ್ಸ್ ಪ್ರಕರಣದಿಂದ ಇಡೀ ಮಹಾರಾಷ್ಟ್ರಕ್ಕೆ ಬೆಂಕಿ ಹತ್ತುವುದೆಂದು ಶಿವಸೇನಾ ಪ್ರಮುಖ ಬಾಳಾ ಠಾಕ್ರೆ ಅವರ ಮಾತಿಗೆ ಉತ್ತರವಾಗಿ ಮುಂಬೈಯಲ್ಲಿ ನೂರಾರು ಕಾರ್ಖಾನೆಗಳು ಮುಚ್ಚಿದ್ದು ಸಾವಿರಾರು ಕಾರ್ಮಿಕರು ಉಪವಾಸ ಬೀಳುವ ಪರಿಸ್ಥಿತಿ ಬಂದಿದೆ. ಮೊದಲು ಅಂಥ ಕಾರ್ಮಿಕರ ಒಲೆಯ ಬೆಂಕಿ ಹೊತ್ತಿಸುವ ಕೆಲಸ ಠಾಕ್ರೆಯವರು ಮಾಡಲಿ ಎಂದು ಶ್ರೀ ಪ್ರಕಾಶ್ ಅಂಬೇಡ್ಕರ್ ಅವರು ಲಕ್ಷಾಂತರ ಅಂಬೇಡ್ಕರ್ ಅಭಿಮಾನಿಗಳನ್ನು ಉದ್ದೇಶಿಸಿ ಮಾರ್ಮಿಕವಾಗಿ ನುಡಿದರು.

'ರಿಡಲ್ಸ್‌ದ ವಿಷಯವನ್ನು ಮುಂದುಮಾಡಿ ಮಹಾರಾಷ್ಟ್ರದ ತುಂಬ ಬೆಂಕಿ ಹಚ್ಚುವ ಪ್ರಯತ್ನವನ್ನು ಶ್ರೀ ಬಾಳಾ ಠಾಕ್ರೆ ಮಾಡುವ ಹಿಂದಿನ ಕುತಂತ್ರವೆಂದರೆ ಈಗ ಬರುವ ಜಿಲ್ಲಾ ಪರಿಷತ್ ಚುನಾವಣೆಯಲ್ಲಿ ಓಟು ಪಡೆಯುವ ಹುನ್ನಾರವೆಂದೂ ಇದನ್ನು ಅರಿತೇ ಮರಾಠ ಮಹಾ ಸಂಘದ ಅಧ್ಯಕ್ಷ, ಶ್ರೀ ಶಶಿಕಾಂತ ಪವಾರ್ ಅವರು ರಿಡಲ್ಸ್‌ದ ಬಗ್ಗೆ ಈ ಹಿಂದೆ ಇದ್ದ ಅವರ ನಿಲುವನ್ನು ಬದಲಿಸಿಕೊಂಡಿದ್ದಾರೆ. ಅವರ ಈ ಹೊಸ ನೀತಿ ಸ್ವಾಗತಾರ್ಹವೆಂದು ಭಾರತೀಯ ದಲಿತ ಪ್ಯಾಂಥರ್ಸ್ ಅಧ್ಯಕ್ಷ ಶ್ರೀ ರಾಮದಾಸ ಅಟವಾಲೆ ನುಡಿದರು.

ಮುಂದುವರೆದ ಅಟವಾಲೆ ಅವರು "ದಲಿತರ ಹತ್ತಿರವೂ ಸಹ ಶಸ್ತ್ರಾಸ್ತ್ರಗಳು ಇವೆ. ಆದರೆ ಆ ಶಸ್ತ್ರಗಳೆಂದರೆ ವಿಚಾರದ, ಸಿದ್ಧಾಂತದ, ತಾತ್ವಿಕತೆಯ ಶಸ್ತ್ರಗಳು, ದಲಿತರ ಹತ್ತಿರ ಸಾಕಷ್ಟು ಇವೆ. ನಾವು ಮುಷ್ಠಿಯನ್ನು ಮುಚ್ಚಿಕೊಂಡಿದ್ದೇವೆ. ಒಂದು ವೇಳೆ ನಮ್ಮ ಮುಚ್ಚಿದ ಮುಷ್ಠಿಯನ್ನು ಬಿಚ್ಚಿದರೆ ಅದರ ಪರಿಣಾಮವನ್ನು ಪ್ರಥಮವಾಗಿ ಶಿವಸೇನಾ ಅನುಭವಿಸಬೇಕಾಗುತ್ತದೆ' ಎಂದು ಶ್ರೀ ರಾಮದಾಸ್ ಅಟವಾಲೆ ಎಚ್ಚರಿಸಿದರು.

---

**ಶಿವಸೇನಾದಂತಹ ಮತಾಂಧ ಶಕ್ತಿಗಳು ತಲೆ ಎತ್ತಿದ್ದನ್ನು ಕಂಡು ಮಹಾರಾಷ್ಟ್ರದ ದಲಿತ ಸಂಘಟನೆಗಳು ಈಗ ಎಚ್ಚರಗೊಂಡಿವೆ. ತಮ್ಮ ವೈಯಕ್ತಿಕ ವರ್ಚಸ್ಸು, ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಒಂದಾಗಲು ಮುಂದಾಗಿವೆ.**

---

ಡಾ॥ ಅಂಬೇಡ್ಕರ್ ವಿಚಾರಗಳನ್ನು ಜೀವಂತವಾಗಿ ಉಳಿಸಲು ನಾವೆಲ್ಲರೂ ಸನ್ನದ್ಧರಾಗಿರಬೇಕೆಂದು ದಲಿತ ಮುಕ್ತಿ ಸೇನಾದ ಶ್ರೀ ಜೋಗೇಂದ್ರ ಕವಾಡೆ ತಿಳಿಸಿದರು.

ಈ ಹೋರಾಟ ಕೇವಲ ರಿಡಲ್ಸ್‌ಗೆ ಸಂಬಂಧಪಟ್ಟಿದ್ದಷ್ಟೇ ಅಲ್ಲ. ಇದು ವಿಚಾರ ಸ್ವಾತಂತ್ರ್ಯದ ಪುಸ್ತಕ ಪ್ರಕಾಶನದ, ಅಭಿವ್ಯಕ್ತಿ ಸ್ವಾತಂತ್ರ್ಯದ ಸಲುವಾಗಿ ಹೂಡಿರುವ ಹೋರಾಟ. ಇದನ್ನು ನಾವೆಲ್ಲರೂ ಗಂಭೀರವಾಗಿ ಪರಿಗಣಿಸಿ ಎಲ್ಲಾ ಪ್ರಗತಿಪರರೂ ಇದರ ವಿರುದ್ಧ ಸಂಘಟಿತ ಹೋರಾಟ ಮಾಡುವುದು ಅತ್ಯಗತ್ಯವೆಂದು ಪ್ರಾಧ್ಯಾಪಕ ಶ್ರೀ ಅರುಣ ಕಾಂಬಳೆ ಅವರು ನುಡಿದರು.

'ವಿಚಾರವಂತರಾದ, ಸ್ವಾತಂತ್ರ್ಯ ಪ್ರಿಯರಾದ ತಮ್ಮ ತಂದೆಯವರಾದ ಶ್ರೀ ಪ್ರಭೋದ ಅವರನ್ನೆ ಮನ್ನಿಸಲಾರದಂಥ, ಮರ್ಯಾದಿಸಲಾರದಂಥ ಬಾಳಾ ಠಾಕ್ರೆ ಡಾ॥ ಅಂಬೇಡ್ಕರ್ ಅವರನ್ನು ಹೇಗೆ ಮನ್ನಿಸಿಯಾರು ?' ಎಂದು ಡಾ॥ ಅಂಬೇಡ್ಕರ್‌ರವರ ಪತ್ನಿ ಮಾಯಾತಾಯಿ ಅಂಬೇಡ್ಕರ್ ನುಡಿದರು. ಮುಂದುವರೆದ ಅವರು ಡಾ॥ ಅಂಬೇಡ್ಕರ್ ಅವರು ಬರೆದ ಗ್ರಂಥಗಳನ್ನು ಇರುವಂತೆಯೇ ಪ್ರಕಟಿಸಿದರೆ ಸರಿ, ಇಲ್ಲದಿದ್ದರೆ ಸರ್ಕಾರದ ವಶದಲ್ಲಿರುವ ಅಂಬೇಡ್ಕರ್ ಅವರ ಅಪ್ರಕಟಿತ ಬರಹಗಳನ್ನು ಮರಳಿ ಪಡೆದು ದಲಿತ ನಿಧಿಯನ್ನು ಸಂಗ್ರಹಿಸಿ ಆ ಮೂಲಕ ನಾವೆಲ್ಲರೂ ಪ್ರಕಟಿಸಿದರಾಯಿತು" ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸಿದರು.

"ಈಗಿನ ಈ ರಿಡಲ್ಸ್‌ದ ಹೋರಾಟ ಇಂದು ಕೇವಲ ಮಹಾರಾಷ್ಟ್ರದಲ್ಲಿ ಮಾತ್ರ ಇಲ್ಲ. ಇದು ಇಂದು ಉತ್ತರ ಭಾರತದಲ್ಲಿಯೂ ಸಹ ಹರಡಿಕೊಂಡಿದೆ. ನಮ್ಮ ಪೂರ್ವಜರು ಸವರ್ಣೀಯರ, ಜಾತ್ಯಾಂಧರ, ಮೇಲ್ವರ್ಗದವರ ದೌರ್ಜನ್ಯಗಳನ್ನು ಅವರು ಕೊಡುವ ಕಿರುಕುಳವನ್ನು ಸಹಿಸಿಕೊಂಡು ಬಂದಿದ್ದಾರೆ. ಆದರೆ ಇಂದು ಅವರ ಸಂತತಿಯ ಮಕ್ಕಳಾದ ನಾವು ಇಂತಹ ದೌರ್ಜನ್ಯಗಳನ್ನು ಮೇಲ್ವರ್ಗದವರ ಕಿರುಕುಳವನ್ನು ಸಹಿಸಿಕೊಳ್ಳಲಾರೆವು" ಎಂದು ಮಾಜಿ ಸಂಸತ್ ಸದಸ್ಯ ಮತ್ತು ಬಿಹಾರದ ದಲಿತ ಮುಖಂಡರಾದ ಶ್ರೀ ರಾಮವಿಲಾಸ ಪಾಶ್ವಾನ್ ಬಹಿರಂಗ ಸಭೆಯಲ್ಲಿ ಮಾತನಾಡುತ್ತ ನುಡಿದರು. ಮುಂದುವರೆದ ಅವರು ಶೋಷಿತ ದಲಿತ ಜನಾಂಗವನ್ನು ದಬ್ಬಾಳಿಕೆ ಮಾಡಿ ಅವರನ್ನು ಒತ್ತಾಯದಿಂದ ತುಳಿದಿಡುವ ಪ್ರಯತ್ನ ಮಾಡಿದರೆ, ದಲಿತರಲ್ಲಿ ಕುದಿಯುತ್ತಿರುವ ಜ್ವಾಲಾಮುಖಿಯ ಆಸ್ಫೋಟವಾದೀತು. ಇದನ್ನು ಈ ದೇಶದ ಜಾತ್ಯಾಂಧರು ಲಕ್ಷ್ಯದಲ್ಲಿ ಇಡಬೇಕೆಂದು ಶ್ರೀ ರಾಮವಿಲಾಸ ಪಾಶ್ವಾನ್ ನುಡಿದರು.

"ಪ್ರತಿಯೊಂದು ಸಂದರ್ಭಕ್ಕೂ ದಿಲ್ಲಿ ಕಡೆ ಮುಖ ಮಾಡಿ ನೋಡುವ ಮುಖ್ಯಮಂತ್ರಿ ಶಂಕರರಾವ್ ಚವ್ಹಾಣರ ಕೀಲಿಕೈ ದಿಲ್ಲಿಯಲ್ಲಿದೆ, ಇಲ್ಲಿಲ್ಲ" ಎಂದು ಇನ್ನೂ ಖಚಿತ ನಿರ್ಧಾರಕ್ಕೆ ಬಾರದ ಚವ್ಹಾಣರನ್ನು ದಲಿತ ಪ್ಯಾಂಥರ್ಸ್ ನಾಯಕ ನಾಮದೇವ ಢಸಾಳ ವ್ಯಂಗ್ಯದಿಂದ ಚುಚ್ಚಿದರು.

ಡಾ॥ ಬಾಬಾ ಸಾಹೇಬ ಅಂಬೇಡ್ಕರ್‌ರವರ ಗ್ರಂಥದಲ್ಲಿರುವ ಒಂದೇ ಒಂದು ಅಕ್ಷರವನ್ನೂ ತೆಗೆಯಕೂಡದು. ಇದನ್ನು ತೆಗೆಯಲು ಯಾರಿಗೂ ಹಕ್ಕಿಲ್ಲ. ಅದನ್ನು ಹಾಗೇ ಪ್ರಕಟಿಸಬೇಕು. ಇನ್ನು ಉಳಿದ ಅಪ್ರಕಟಿತ ಸಂಪುಟಗಳನ್ನು ಸಹ ಆದಷ್ಟು ಬೇಗನೆ ಪ್ರಕಟಿಸಬೇಕೆಂದು 'ಮಾಸ್ ಮೂಮೆಂಟನ್' ಅಧ್ಯಕ್ಷ ರಾಜಾ ಢಾಲೆ ತಿಳಿಸಿದರು.

ನೆರೆದಿರುವ ಬೃಹತ್ ಪ್ರಮಾಣದ ಲಕ್ಷಾಂತರ ಜನರ ಪ್ರತಿಭಟನೆಯು ಇಲ್ಲಿಯ ಜಾತ್ಯಂಧ ಮತಾಂಧ ಶಕ್ತಿಗಳ ವಿರುದ್ಧದ ಪ್ರತಿಭಟನೆ ಸೂಚನೆಯಾಗಿದೆ ಎಂದು ಆರ್.ಪಿ.ಐ. ನಾಯಕರಾದ ರಾಸು ಗವಾಯ್‌ರವರು ಹೇಳಿದರು. ಇದೇ ಸಂದರ್ಭದಲ್ಲೇ ಜನಾರ್ದನ ಪಾಟೀಲ್ ಸುಮಂತ ಗಾಯಕವಾಡ್, ಆರ್. ಜಿ. ಧೂಳೆ ಇವರೆಲ್ಲರೂ ಸಹ ಲಕ್ಷಾಂತರ ಜನರ ಬೃಹತ್ ಸಮಾವೇಶವನ್ನುದ್ದೇಶಿಸಿ ಮಾತನಾಡಿದರು.

ಮುಂಬೈಯ ಆಜಾದ್ ಮೈದಾನದಿಂದ ಪ್ರಾರಂಭವಾದ ಮೆರವಣಿಗೆಯು ಕಾಳಾ ಗೋಡಾ ಹುತಾತ್ಮರ ಚೌಕದವರೆಗೂ ಬಂದು ಬಹಿರಂಗ ಸಭೆಯಾಗಿ ಮಾರ್ಪಟ್ಟಿತು. ವಿ.ಟಿ. ಚರ್ಚ್ ಗೇಟ್, ಹಾಂಕಾಂಗ್ ಬ್ಯಾಂಕ್ ಬಿಲ್ಡಿಂಗ್ ಇವೆಲ್ಲ ಕಡೆಗೂ ಇರುವೆಯೂ ನುಸುಳದಂಥ ದಟ್ಟನೆಯ ಜನಜಂಗುಳಿ ಕೂಡಿತ್ತು. ಜಗತ್ತಿನಲ್ಲಿಯೇ ಘಟಿಸಿದ ಮೂರು ಮಹಾ ಹೋರಾಟಗಳಲ್ಲಿಯ ಇದು ಒಂದು ಎಂದು ಪರಿಗಣಿಸಲಾಗಿದೆ. ದೂರ ದೂರದಿಂದ ಬಂದಿದ್ದವರನ್ನು ಆಯಾ ವಸತಿಯ ಜನರು ಹೇಚಿಕೊಂಡು ಬಂದಿದ್ದ ತಮ್ಮ ಬಂಧುಗಳಿಗೆ ಊಟದ ಪೊಟ್ಟಣಗಳನ್ನು ಕೊಟ್ಟು ಸಹಕರಿಸಿದರು. ಒಟ್ಟಿನಲ್ಲಿ ಇದು ಒಂದು ಐತಿಹಾಸಿಕ ಅಭೂತಪೂರ್ವ ಘಟನೆಯಾಗಿ ಇತಿಹಾಸದಲ್ಲಿ ಬರೆದಿಡಲಾಗುವುದು. ●

# ಉಪವಾಸದ ಬೆಳಕಲ್ಲಿ ಬಿಚ್ಚಿಕೊಂಡ ತತ್ತೂರು

ತತ್ತೂರ ಚಂದ್ರಪ್ಪನ ಬಾಯಲ್ಲಿ ರವಿ ಶುಕರೇಗೌಡ ಖಾಲಿ ಮೆಟ್ಟು ಹೆಟ್ಟಿಸಿದನೋ ಮೆಟ್ಟಿಗೆ ಮಲ ಹಚ್ಚಿಸಿ ತಿನ್ನಿಸಿದನೋ ?

ಈ ಪ್ರಶ್ನೆ ಬರಬರುತ್ತ ಒಂದು ಚಿದಂಬರ ರಹಸ್ಯವಾಗಿಬಿಟ್ಟಿದೆ.

ಸತ್ಯ ಅಸತ್ಯದ ಜಿಜ್ಞಾಸೆಗೆ ಜಾರಿದವರು ಇದನ್ನು ಖಂಡಿಸಬೇಕೋ ಖಂಡಿಸಬಾರದೋ ಎಂದು ಮೌನಿಗಳಾಗಿದ್ದಾರೆ. 'ಅಷ್ಟು ಸಣ್ಣ ಘಟನೆಗೆ ಇಷ್ಟು ದೊಡ್ಡ ಪ್ರಚಾರ ಕೊಡಬಾರದಿತ್ತು' ಎಂದು ಗೊಣಗುವವರಿದ್ದಾರೆ. ಬರಿ ಸುಳ್ಳಂತೆ ಎಂದು ಮುಖ ಕಿವಿಚುವವರು ಇದ್ದಾರೆ.

ಫೆಬ್ರವರಿ 16ರ ಮುಂಜಾನೆ ತತ್ತೂರಿನ ಬಸ್ಸು ಹತ್ತಿದ ಶಿವಮೊಗ್ಗೆಯ ಮಿತ್ರರಿಗೆ ಮಾತ್ರ ಆ ಘಟನೆಯ ಕೊದಲು ಸೀಳುವ ನಿಖರ ವಿವರಗಳು ಮುಖ್ಯವಾಗಿರಲಿಲ್ಲ. ಒಬ್ಬ ಹಣವಂತ ಒಬ್ಬ ಕಡುಬಡವನನ್ನು ಹೀಯಾಳಿಸಿದ್ದ. ಒಬ್ಬ ಬಲಿಷ್ಠ ಲಿಂಗಾಯಿತ ಒಬ್ಬ ನಿರ್ಗತಿಕ ದಲಿತನನ್ನು ಅವಮಾನಿಸಿದ್ದ. ಒಬ್ಬ ರಾಜಕೀಯ ದರ್ಪಿಷ್ಠ ಒಬ್ಬ ಅಬ್ಬೆಪ್ಯಾರಿಯನ್ನ ಪಶುವಿನಂತೆ ಟ್ರೀಟ್ ಮಾಡಿದ್ದ. ಇಷ್ಟು ಕಾರಣ ಸಾಕಾಗಿದ್ದವು ಅವರ ಶಿವರಾತ್ರಿ ಯಾತ್ರೆಗೆ.

ಹಾಳು ಮೌನದ ಹಳ್ಳಿಯ ಮೇಲೆ ಹಗಲು ಸುರಿಯುತ್ತಿದ್ದರೂ ಅಂಜಿಕೆ ಗುಮಾನಿಗಳ ಕತ್ತಲು ಕವಿದಿತ್ತು. ಮಾನವೀಯ ಘನತೆಯನ್ನು ಕೊಂದಂಥ ಸೂತಕ ಭಾವ ವಾತಾವರಣದಲ್ಲಿ ಬೆರೆತಿತ್ತು. 'ಬಾಯಿಗೆ ಮೆಟ್ಟು ಇಟ್ಟೇನು' ಮೆಟ್ಟಿಗೆ ಹೇಲಚ್ಚಿ ಹೊಡೆದೇನು ಎಂಬಂಥ ನುಡಿಗಟ್ಟುಗಳಿಂದ ಮೈಯುಂಡ ಭಾಷೆ ಅಲ್ಲಿನ ಗಾಳಿಯೊಡನೆ ಸುಳಿದಾಡುತ್ತಿತ್ತು. ಅಂಥ ಭಾಷೆಯನ್ನ ಕಟ್ಟಿಕೊಟ್ಟ ಬದುಕಿನ ಪುರಾವೆಗಳಂತೆ ನಿಂತಿದ್ದವು—ಪಾಳೆಯಗಾರಿವಾಡೆಗಳು ಮತ್ತು ನೋವುಗಣ್ಣಿನ ಗುಡಿಸಲುಗಳು. ಹದಿನೈದಿಪ್ಪತ್ತು ದಿನಗಳಿಂದ ಹಳ್ಳಿಗೆ ಹಳ್ಳಿಯೇ ಉಪವಾಸ ಬಿದ್ದಂತೆ ಕಂಡಿತು ಶಿವರಾತ್ರಿಯ ಆ ಮುಂಜಾನೆ, ಹೀಗೆ ತತ್ತರಿಸಿ ಕೂತ ತತ್ತೂರಿಗೆ ಶಿವಮೊಗ್ಗೆಯ ಲೇಖಕರು ಅಧ್ಯಾಪಕರು ವಿದ್ಯಾರ್ಥಿಗಳು ದಸಂಸ ಕಾರ್ಯಕರ್ತರು ಎಡಪಂಥೀಯರು ಮುಂತಾಗಿ ಒಂದಿಪ್ಪತ್ತೈದು ಮಂದಿ ಬಂದು ಇಳಿದರು.

ಶಿವಭಾವ ಕರಡಿಗೆಯ ಕಲ್ಲಾಗಿ ಕರಗಿಹೋದದ್ದಕ್ಕೆ ಮನುಷ್ಯನೇ ಮನುಷ್ಯನನ್ನು ಅಸಹ್ಯ ನರಕದಲ್ಲಿ ಅದ್ದಿ ತೆಗೆದದ್ದಕ್ಕೆ ಮರ ಮರ ಮರುಗಿದ ಈ ಮಂದಿ ಪಶ್ಚಾತ್ತಾಪ ಪ್ರಾಯಶ್ಚಿತ್ತ ಪ್ರತಿಭಟನೆಗಳ ರೂಪವಾಗಿ ಒಂದು ದಿನದ ಸಾಂಕೇತಿಕ ಉಪವಾಸ ಕೈಗೊಂಡು ಮರವೊಂದರ ನೆರಳಿಗೆ ಕೂತರು. ಹೀಗೊಂದು ಶಿವರಾತ್ರಿ ಆಚರಿಸಿದರು.

**ತತ್ತೂರಿನ ಬಸ್ಸು ಹತ್ತಿದ ಶಿವಮೊಗ್ಗೆಯ ಗೆಳೆಯರಿಗೆ ಮಾತ್ರ ಆ ಘಟನೆಯ ಕೂದಲು ಸೀಳುವ ನಿಖರ ವಿವರಗಳು ಮುಖ್ಯವಾಗಿರಲಿಲ್ಲ. ಒಬ್ಬ ಹಣವಂತ ಒಬ್ಬ ಕಡುಬಡವನನ್ನು ಹೀಯಾಳಿಸಿದ್ದ, ಒಬ್ಬ ಬಲಿಷ್ಠ ಲಿಂಗಾಯಿತ ಒಬ್ಬ ನಿರ್ಗತಿಕ ದಲಿತನನ್ನು ಅವಮಾನಿಸಿದ್ದ, ಒಬ್ಬ ರಾಜಕೀಯ ದರ್ಪಿಷ್ಠ ಒಬ್ಬ ಅಬ್ಬೆಪ್ಯಾರಿಯನ್ನು ಪಶುವಿನಂತೆ ಟ್ರೀಟ್ ಮಾಡಿದ್ದ, ಇಷ್ಟು ಕಾರಣ ಸಾಕಾಗಿದ್ದವು ಅವರ ಶಿವರಾತ್ರಿ ಯಾತ್ರೆಗೆ.**

**• ಬಿದರಳ್ಳಿ**

ಎಲಿಟೆಂಟ್ ಮೂಗಿನ ಕೆ. ರಾಮದಾಸ್ ಅದು ಹೇಗೋ ಮೈಸೂರಿಂದ ತತ್ತೂರಿಗೆ ಧಾವಿಸಿಬಿಟ್ಟಿದ್ದರು 'ಮಾನವೀಯತೆಗೆ ಅವಮಾನ ಮಾಡಿದ ತತ್ತೂರಿನ ಹೇಯ ಕೃತ್ಯಕ್ಕೆ ಪ್ರತಿಭಟನೆ' ಎಂದು ಅವರು ಬರೆದು ಕೊಟ್ಟ ಸ್ಲೋಗನ್ನನ್ನು ಗೋಪಾಲನಾಯ್ಕರು ಕಟ್ಟಿದ ಪ್ಲಕಾರ್ಡಿನ ಮೇಲೆ ಬರೆದರು ರಾಜಪ್ಪ ದಳವಾಯಿ. ಅಷ್ಟರಲ್ಲಿ ಅಂತರಾಷ್ಟ್ರೀಯ ಖ್ಯಾತಿಯ ದಲಿತ ಚಂದ್ರಪ್ಪ ಮುಂಡು ಟುವಾಲು ಉಟ್ಟು ಮಣ್ಣಾದ ಬಳಂಗಿ ತೊಟ್ಟು ಗಿಡ್ಡಗಿಡ್ಡಗೆ ನಡೆದುಬಂದ. ಅವನ ಸಂಬಂಧಿ ಮಧ್ಯವಯಸ್ಸು ದಾಟಿದ ಫಕೀರಪ್ಪನೂ ಬಂದ. ಅವರವರಿಗೆ ವಿವರಿಸಿ ಸೋತುಹೋಗಿದ್ದ ಚಂದ್ರಪ್ಪ ಪ್ರಶ್ನಿಸಿದವರಿಗೆ ಮಾತ್ರ ಉತ್ತರಿಸುತ್ತಿದ್ದರೆ ಫಕೀರ ತಾನೆ ಬಡಬಡ ನೂರೆಂಟು ಘಟನೆಗಳನ್ನು ವರ್ಣಿಸಿ ಗೌಡನ ಚರಿತ್ರೆಯನ್ನೆಲ್ಲಾ ಅನಾವರಣಗೊಳಿಸುತ್ತಿದ್ದ.

ಕೂತ ಮರದ ನೆರಳು ಮರವನ್ನು ಸುತ್ತುಹಾಕತೊಡಗಿದಂತೆ ಉಪವಾಸದ ತಾಸುಗಳು ಉರುಳತೊಡಗಿದುವು. ದಸಂಸದ ಚಂದ್ರಪ್ಪ, ನಾಗಭೂಷಣ ಹಲಿಗೆ ಬಾರಿಸುತ್ತ ಹೋರಾಟದ ಹಾಡುಗಳನ್ನು ಅಂದರು. ಧರ್ಮಪ್ರಭು ಬಂದವರ ಸಹಿ ಕಲೆಕ್ಟ್ ಮಾಡಿದರು. ಆನವಟ್ಟಿಯಿಂದ ಪೋಲಿಸರ ದಂಡು ಬಂದು ಸುತ್ತಮುತ್ತ ಠಳಾಯಿಸಿತು. ಸಬ್ ಇನ್ಸ್‌ಪೆಕ್ಟರೂ ತನ್ನ ಗುಡಗುಡಿ ಏರಿ ಬಂದು ಚಾವೊತ್ತು ಅದರ ಟ್ಯಾಂಕಿನ ಮೇಲೆ ತನ್ನಹೊಟ್ಟೆ ಇಳಿಬಿಟ್ಟು ಕೂತು ಕಾದರು. ಇವು ಯಾವೂ ಗಾಂಧಿ ಜಾತಿಯವು ನಿರುಪದ್ರವಿಗಳು ಎಂದುಕೊಂಡು ಹೋಗಿಬಿಟ್ಟರು. ಉಪವಾಸದ ಬೆಳಕಲ್ಲಿ ಹಳ್ಳಿಯ ಮನಸ್ಸಿಗೆ ಮೆತ್ತಿದ ಮಲವನ್ನ ತೊಳೆಯುತ್ತ ತಾಸು ತಾಸಿಗೂ ಜಾಗ ಬದಲಿಸುತ್ತಿದ್ದ ನೆರಳನ್ನ ಅನುಸರಿಸುತ್ತ ಕೂತಿದ್ದ ಮುಷ್ಕರಕಾರರ ಗುಂಪು ತತ್ತೂರಿನ ಮಕ್ಕಳನ್ನ ಹಿರಿಯರನ್ನ ಆಕರ್ಷಿಸಿತು. ಅವಮಾನಕ್ಕೆ ಬಿದ್ದ ಚಂದ್ರಪ್ಪ, ಫಕೀರಪ್ಪ ಪ್ರತ್ಯಕ್ಷ ದರ್ಶಿ ಸುಭಾಸ್ ಚಂದ್ರ ಕಟ್ಟದ ಹಗ್ಗ ಬಿಚ್ಚಿದ ಗುತ್ಯಪ್ಪ ಅರ್ಜಿ ಬರೆದ ರಾಮಚಂದ್ರ, ಗುಡುಗಿನ ಕೊಪ್ಪದ ಸಿದ್ದಪ್ಪ ಗೌಸ್ ಸಾಬ್ ಹಾಗೂ ಹೆಸರು ಗೊತ್ತಾಗದ ಹಲವಾರು ಮಂದಿ ಗುಂಪಿನ ಸುತ್ತ ನೆರೆದು ರವಿಶಂಕರನ ಪುರಾಣದ ಅಧ್ಯಾಯಗಳನ್ನು ತಿರುವಿ ಹಾಕುತ್ತಿದ್ದಾಗ ಇಷ್ಟೆಲ್ಲದರ ಬಗ್ಗೆ ಏನೂ ಗೊತ್ತಿರದ ಅಮಾಯಕನಂತೆ ಪೂಜಾರಿ ಮೂಕಪ್ಪ ಬೆಳ್ಳಿಕರಡಿಗೆಯನ್ನ ಕಂಕುಳಲ್ಲಿ ನೇತಾಡಿಸುತ್ತ ಕೊಡಪಾನ ಹೊತ್ತು ಶಿವಪೂಜೆಗೆ ಹೊರಟಿದ್ದ. ಒಂದು ರೀತಿಯಲ್ಲಿ ಇಡಿ ಘಟನೆ ಅವನಿಂದಲೇ ಟ್ರಿಗರ್ ಆಫ್ ಆದದ್ದು ತಾನೆ. ತನ್ನ ಇಟ್ಟಿಗೆ ಗೂಡು ಸುಡಿಸುವ ಮುನ್ನ ದೇವರಿಗೆ ಪೂಜೆ ಮಾಡಿಸಲು ಬಂದಿದ್ದ ಚಂದ್ರಪ್ಪ. ದೇವರಿಗೆ ಈಗ ಪುರುಸೊತ್ತಿಲ್ಲವೆಂಬಂತೆ ಪೂಜೆ ಮಾಡಲು ಸಾಧ್ಯವಿಲ್ಲಾಂದ ಪೂಜಾರಿ ಮೂಕಪ್ಪ. ಸಿಟ್ಟಿಗೆದ್ದ ಭಕ್ತ ಬಯ್ಯತೊಡಗಿದ. ಉಳ್ಳವರ ಪರ

ವಾಗಿಯೇ ಹುಟ್ಟಿಬಂದ ಗಾದೆಗಳಲ್ಲೊಂದಾದ ಬಡವನ ಸಿಟ್ಟು ದವಡೆಗೆ ಮೂಲ ಎಂಬುದು ಮತ್ತೊಮ್ಮೆ ಸಾಬೀತಾಯಿತು. ಲಿಂಗ ಮೆಚ್ಚಿ ಅಹುದಹುದೆನ್ನುವಂತೆ ಜಾತಿಗಳನ್ನೆಲ್ಲಾ ಮುರಿದೊಗೆದು ಎಲ್ಲರನ್ನು ಒಂದು ಮಾಡಲು ಹೋರಾಡಿದ ಬಸವನ ನಾಡಿನಲ್ಲಿ ಅವನ ಅನುಯಾಯಿಗಳು ತಲೆ ತುಂಬಾ ಮಲ ತುಂಬಿಕೊಂಡವರಂತೆ ವರ್ತಿಸಿದರು.

ಹೀಗೊಂದು ದಿನ ಹಾಳೆಯ ಮೇಲೆ ದಾಖಲಾಗುತ್ತೇನೆಂದು ಗೊತ್ತಿರಲಿಲ್ಲವೇನೋ ರವಿಶಂಕರಗೌಡನ ಚರಿತ್ರೆಗೆ. ಆ ಚರಿತ್ರೆಯಲ್ಲಿ ಭಾಗವಹಿಸಿದ ಹಾಗೂ ಮೂಕಪ್ರೇಕ್ಷಕರಾದ ಸಾವಿರಾರು ಮಂದಿಯ ಮಿದುಳುಗಳಲ್ಲಿ ನೆನಪಿನ ಸುರುಳಿಗಳಾಗಿ ಅಚ್ಚಳಿಯದೆ ನಿಂತಿದೆ ಅದು. ಅದರ 1 ಪಕ್ಷಿನೋಟ ಇಲ್ಲಿದೆ. ಲಿಂಗಾಯತರಲ್ಲಿ ಇವರನ್ನ ಮಾಲಾಗೌಡರು ಎನ್ನುತ್ತಾರೆ. ಸುಮಾರು ಇನ್ನೂರು ಎಕರೆ ಜಮೀನು ಉಳ್ಳ ಸ್ಥಿತಿವಂತ ಕುಟುಂಬ ಇವರದು. 2ರಷ್ಟು ಜಮೀನು ಸತ್ತುಹೋಗಿರುವ ತಂದೆ ಪುಟ್ಟೇಗೌಡರ ಹೆಸರಿನಲ್ಲೇ ಇದೆ. ಸೀಲಿಂಗ್ ಲಿಮಿಟ್ಟಿಗೆ ಜಾಸ್ತಿಯಾಗಿಬಿಡುತ್ತೆ ಅಂತ ಸತ್ತವರ ಹೆಸರಲ್ಲೇ ಖಾತೆ ಇಟ್ಟುಕೊಂಡು ಬಂದಿದ್ದಾರೆ. ಅವರ ಮಕ್ಕಳಾದ ವೀರಪ್ಪಗೌಡ (ದಾದಾ) ವಿಶಾಲಗೌಡ, ಬಾಬುಗೌಡ, ಶಿವಾನಂದಗೌಡ ಮತ್ತು ರವಿಶಂಕರಗೌಡ ಇವರು ಆಗಾಗ ತಮ್ಮ ಹೆಸರಿಗೆ ಇಷ್ಟಿಷ್ಟೇ ಎಕರೆಗಳನ್ನ ಟ್ರಾನ್ಸ್‌ಫರ್ ಮಾಡಿಸಿಕೊಂಡು ಸಣ್ಣ ಹಿಡುವಳಿದಾರರ ಸಾಲ ಮುಂತಾದ ಸರ್ಕಾರ ಕೊಡುವ ಸವಲತ್ತುಗಳನ್ನು ಬಳಸಿಕೊಂಡು ಸುಖವಾಗಿದ್ದಾರೆ. ಬಸ್ಸಿಳಿದರೆ ಸಾಕು ರಾಜವಾಡೆ ಥುತ್ತನೆ ಕಣ್ಣಿಗೆ ಬಿದ್ದು ಒಂದಾನೊಂದು ಕಾಲದಿಂದ ನಡೆದುಬಂದಿರುವ ಪಾಳೆಯಗಾರಿ ಆಡಳಿತದ ಕಲ್ಪನೆ ಕೊಟ್ಟು ಬಿಡುತ್ತದೆ. ಚಂದ್ರಪ್ಪನವರ ಘಟನೆಯವರೆಗೂ ಸುಂದರವಾದ ಬುಲ್ಗನ್ನಿನ ಗಡ್ಡ ಬೆಳೆಸಿದ್ದ ರವಿಶಂಕರಗೌಡ. ರೌಡಿಥರ ಭಯೋತ್ಪಾದಕರ ಥರ ಕಾಣುತ್ತಿ ಎಂದು ಎಚ್ಚರಿಸಿದ ಸಚಿವ ಜಾಲಪ್ಪ ಅದು ಮಂಗಮಾಯವಾಗಲು ಕಾರಣರಾಗಿದ್ದಾರೆ. ಕೆಂಪು ಕೆಂಪಗೆ ಐದು ಮುಕ್ಕಾಲಡಿ ಬೆಳೆದಿರುವ ರವಿಶಂಕರ ಇನ್ನೂ 36ರ ಯೌವನಸ್ಥ. ಕಂಬಾರರ 'ಹಂಡ ಹೋರಿ'ಯನ್ನು ನೆನಪಿಸುವಂಥಾತ ಇವರ ಮನೆಯಲ್ಲಿ 50 ಎಮ್ಮೆಗಳು 60 ದನಗಳು ಇವೆ ದಿನಾ ಎರಡು ಬಕೇಟು ಮಜ್ಜಿಗೆಯನ್ನ ಎಮ್ಮೆ ದನಗಳಿಗೇ ಕುಡಿಸುತ್ತಾರೆ. ಊರವರಿಗೆ ಮಜ್ಜಿಗೆ ಕೊಟ್ಟರೆ ಅದಕ್ಕವರು ಉಪ್ಪು ಹಾಕಿದರೆ ತಮ್ಮ ಕರುಗಳು ಸಾಯುತ್ತವೆ ಎಂಬ ನಂಬಿಕೆಯಿಂದ ಹೀಗೆ ಮಾಡುತ್ತಾರೆ.

ರೈಸ್‌ಮಿಲ್ಲು ಕಿರಾಣಿ ಅಂಗಡಿ ಕಾರು ಟ್ರಾಕ್ಟರು ಇನ್ನೂ ಏನೇನೋ ಉಳ್ಳ ಭಾರಿ ಜಮೀನ್ದಾರ ಈ ರವಿಶಂಕರ. ಸಾಲದ್ದಕ್ಕೆ ಇವ ಪದವೀಧರ ಬೇರೆ. ಕಾಲೇಜು ದಿನಗಳಿಂದಲೂ ಇವ ಸಾಕಷ್ಟು ಪ್ರಸಿದ್ಧ ಪುರುಷನೆ. ಹಂಸಭಾವಿ ಕಾಲೇಜಿನಲ್ಲಿ ಪುಂಡಾಟಿಕೆ ಮಾಡಿದ್ದಕ್ಕೆ ಇವನನ್ನು ತಾರುಕಂಬಕ್ಕೆ ಕಟ್ಟಿ ತಲೆ ಬೋಳಿಸಿದ್ದರು. ಧಾರಾವಾಡ ಕಾಲೇಜಲ್ಲಿ ಗುಂಡಾಗಿರಿ ನಡೆಸಿದ್ದಕ್ಕೆ ಡಿ.ಎಸ್.ಪಿ. ಯವರು ಊರತನಕ ಬಂದು ಎನ್‌ಕ್ವೈರಿ ನಡೆಸಿ ಶಿಕ್ಷೆ ವಿಧಿಸಿದ್ದರು. ಊರಿಗೆ ಬಂದು ನೆಲೆಸಿದ ಮೇಲೆ ಅಂಚಿಪೇಟೆ ಜಯಣ್ಣ, ಕೃಷ್ಣ ಮಲ್ಲಿಕಾರ್ಜುನ ಹಾಗೂ ವಿಧ್ಯಾದರ ಇವನ ಚಮಚಾಗಳಾದರು. ಕುಲುಮೆಯಲ್ಲಿ ನಡೆದ ಸಣ್ಣ ಜಗಳದ ನೆವ ಮಾಡಿ ಹುಣಸೆವಳ್ಳಿ ಬಸವಂತಪ್ಪಗೆ ರವಿಶಂಕರ ಅರ್ಧ ಮೀಸೆ ಅರ್ಧ ತಲೆ ಬೋಳಿಸಿ ಅಲ್ಲಿಗೆ ಸುಣ್ಣ ಕೆಮ್ಮಣ್ಣು ಹಚ್ಚಿಸಿ ಕೈಗೆ ಚಿಪ್ಪು ಕೊಟ್ಟು ಟ್ರಾಕ್ಟರಲ್ಲಿ ಮೆರವಣಿಗೆ ಮಾಡಿಸಿದ. ಬಿಡಿಸಿಕೊಳ್ಳಲು ಬಂದ ಬಸವಂತಪ್ಪನ ತಾಯಿಗೆ ಪಕ್ಕೆಲುಬು ಮುರಿಯುವಂತೆ ಹೊಡೆಸಿದ. 'ವೀರಪ್ಪಯ್ಯ ಎಲ್ಲೈಲೆ' ಎಂದು ಕೇಳಿದ ಹರಿಜನರ ಫಕೀರಪ್ಪನನ್ನು ತನ್ನಣ್ಣ ದಾದಾನನ್ನ ಏಕವಚನದಲ್ಲಿ ಕರೆದನೆಂಬಕಾರಣಕ್ಕಾಗಿ ತಮ್ಮ ವಾಡೆಯ ಗಣಪತಿ ಕ್ವಾಣೆಯಲ್ಲಿ ಕೂಡಿ ಮೈಮುರಿದು ಹೊಡೆಸಿದ ಬ್ರಾಹ್ಮಣ ಹುಡುಗಿಯೊಬ್ಬಳನ್ನ ಕೆಡಿಸಿ ಅವರ ಕುಟುಂಬವನ್ನೇ ಊರು ಬಿಟ್ಟು ಓಡಿಸಿದ. ಮೆಹಬೂಬ ಸಾಬ್ ಎಂಬುವರಿಗೆ ಕೈಗೆ 50 ಕೆ. ಜಿ. ಕಲ್ಲು ಕಟ್ಟಿ ಗೋಡೌನ್‌ನಲ್ಲಿ ಕಟ್ಟಿ ಹಾಕಿ ಹೊಡೆಸಿದ. ಸೊರಬದ ಸಂತೆಯಲ್ಲಿ ಇವರಣ್ಣನ ಪರಿಚಯ ಹಿಡಿಯಲಿಲ್ಲ ಎಂಬ ಕಾರಣಕ್ಕೆ ಗೌಸ್ ಸಾಬರಿಗೆ ಹೊಲದಲ್ಲಿ ದೊಣ್ಣೆಯಿಂದ ಹೊಡೆಸಿ ತಿರುಗಿ ಅವರೂ ಹೊಡೆದು ದೊಡ್ಡದೊಂದು ಕೋರ್ಟು ವಾಜ್ಯವೇ ನಡೆಯಿತು ಸಾಂಗ್ಲಿಯಾನ ಕಾಲದಲ್ಲಿ. ಗೌಸ್ ಸಾಬರಿಗೆ ಅಪ್ತರಾದ ಮಾದೇವಪ್ಪ ಗುರಶಾಂತಯ್ಯ ಈರಪ್ಪಶೆಟ್ಟಿ ಇವರ ಮನೆಗಳಿಗೆ ರಾತ್ರೋರಾತ್ರಿ ನುಗ್ಗಿ ಖಾರದ ಪುಡಿ ಉಗ್ಗಿ ದೊಣ್ಣೆಗಳಿಂದ ಹೊಡೆಸಿದ. ಹುಲ್ಲಿನ ಸಂಬಂಧದ ಜಗಳದಲ್ಲಿ ಹರಿಜನರ ಫಕೀರಪ್ಪನನ್ನ ಲೈಟುಕಂಬಕ್ಕೆ ಕಟ್ಟಿಹಾಕಿ 101 ಚಪ್ಪಲಿ ಏಟು ಹೊಡೆಸಿದ. ನಂತರ ಫಕೀರಪ್ಪ ತಾನೂ ಹೊಡೆಯುವುದಾಗಿ ಕೂಗಾಡಿದಾಗ ರವಿಶಂಕರನ ಚೇಲಾ ಅಂಗಡಿ ಕೃಷ್ಣಪ್ಪ ಕೋವಿ ತೆಗೆದುಕೊಂಡು ಬಂದು 'ಬರ್ರಲೆ ನಿಮ್ಮೆಂಣ್ತೇನ ಹಡ ಒಬ್ಬೊಬ್ಬರದೆ ಚೆಂಡು ಮುಗಿಲಿಗೆ ಹಾರುಸ್ತೀನಿ' ಎಂದು ನಿಂತ. ತಪ್ಪಿಸಿಕೊಂಡು ಆನವಟ್ಟಿಗೆ ಓಡಿದ ಫಕೀರಪ್ಪ ಪೊಲೀಸರಿಗೆ ದೂರು ಕೊಟ್ಟರೆ ಅವರು ದಾಖಲು ಮಾಡಿಕೊಳ್ಳಲಿಲ್ಲ ಎಂಡಾರ್ಸ್‌ಮೆಂಟೂ ಕೊಡಲಿಲ್ಲ. ಮಂಡಲ ಪಂಚಾಯ್ತಿ ಚುನಾವಣೆ ಹಿಂದಿನ ದಿನ ಗುಡ್ಡಪ್ಪ ಎಂಬುವನಿಗೆ ಇಲ್ಲಿದೆಲ್ಲಾ ಹೇಳುತ್ತಾನೆ, ಕಾಂಗ್ರೆಸ್ಸಿಗೆ ಓಟು ಹಾಕ್ತಾನೆ ಎಂಬ ಕಾರಣಕ್ಕೆ ಚೆನ್ನಾಗಿ ಥಳಿಸಿದ. ಅವನು ಪ್ರತಿಭಟಿಸಿದಾಗ ಮತ್ತೂ ಹೊಡೆದು ತಾನು ಅವನಿಗೆ ಹೊಡೆದೇ ಇಲ್ಲಾ ಎಂಬುದಾಗಿ ಅವನ ಕೈಲೇ ಟಾಂ ಟಾಂ ಹೊಡೆಸಿದ. ತೊಗರ್ಸಿಯಲ್ಲಿ ಹೆಣ್ಣು ಮಗಳೊಬ್ಬಳ ಮೇಲೆ ಉಗುಳಿ 'ಏನ್ ಚಂದದಾಳಲ್ಲೊ' ಎಂದು ಚುಡಾಯಿಸಹೋಗಿ ಅಲ್ಲಿನ ಜನರಿಂದ ಹೊಡೆತ ತಿಂದು ಮಲ್ಲಿಕಾರ್ಜುನ ದೇವಸ್ಥಾನಕ್ಕೆ 1 ಕೆ. ಜಿ. ಎಣ್ಣೆ ದಂಡ ಕೊಟ್ಟು ಬಂದ. ಇವತ್ತಿಗೂ ತಮ್ಮಂಗಡಿ ಮುಂದೆ ಕಾಲ ಮೇಲೆಕಾಲು ಹಾಕಿ ಕೂತು ತನಗಾಗದವರು ರಸ್ತೆ



ಯಲ್ಲಿ ಓಡಾಡಿದರೆ ತನ್ನ ಗಿರಕಿ ಚಪ್ಪಲಿ ಆಡಿಸಿ ಅವರಿಗೆ ಅದರಿಂದ ಬಡಿಯುವ ಮೌನ ಸೂಚನೆ ನೀಡುವುದು ಅವನ ಪರಿಪಾಠವಾಗಿದೆ. ಇಂಥವ ಚಂದ್ರಪ್ಪಗೆ ಅಂಥ ಹೀನ ಅಪಮಾನ ಮಾಡಿರಲಿಕ್ಕಿಲ್ಲ ಎನ್ನುವಿರಾ ?

ಸುಮ್ಮನೆ ಕೂಡದ ರಾಮದಾಸ್ ರವಿಶಂಕರನ್ನ ಹೋಗಿ ಭೇಟಿಯಾಗಿ ಬಂದರು. ಬೆಣ್ಣೆಯಂತೆ ಮಾತನಾಡುತ್ತ 'ಚಂದ್ರಪ್ಪ ಬಹಳ ಒಳ್ಳೆಯವ, ಅಮಾಯಕ ಅವನನ್ನ ಕಾಂಗ್ರೆಯವರು ತಮ್ಮ ಉದ್ದೇಶಕ್ಕೆ ಬಳಸಿಕೊಳ್ಳುತ್ತಿದ್ದಾರೆ' ಅಂದನಂತೆ. 'ನಿ ವ್ಯಾಕೆ ನಿಮ್ಮ ಮಂಡಲ ಪಂಚಾಯ್ತಿ ಸದಸ್ಯತ್ವಕ್ಕೆ ರಾಜಿನಾಮೆ ಕೊಡಬಾರದು' ಅಂದದ್ದಕ್ಕೆ ನಾಯಾಕೆ ಕೊಡಲಿ ಕೇಸು ಇತ್ಯರ್ಥವಾಗಲಿ ಆಮೇಲೆ ನೋಡೋಣ ಎಂದು ಕೂಲಾಗಿ ಹೇಳಿದನಂತೆ ಜನತಾ ಸದಸ್ಯನಾದ ರವಿಶಂಕರನಿಗೆ ಎಲ್ಲ ಮಟ್ಟದಲ್ಲೂ ಗೆದ್ದು ನಿಲ್ಲಬಲ್ಲೆ ಎಂಬ ಭಂಡ ವಿಶ್ವಾಸ ಸಹಜವಾದದ್ದೇ ಅಲ್ಲವೇ ?

ಹರಿಜನರ ಸುಭಾಸ್ ಚಂದ್ರ ಘಟನೆಯ ಐ ವಿಟ್ನಸ್. ಅವನು ಹೀಗೆ ಹೇಳಿದ ; ಶುಕ್ರವಾರ ಸಂಜೆ ಆರುವರೆ ಏಳಕ್ಕೆ ಹೋಟ್ಲಿಗೆ ಬಂದೆ. ಮೂಕಪ್ಪ,ಚಂದ್ರಪ್ಪ ಜಗಳ ವಾಡುತ್ತಿದ್ದರು. ರವಿಚಂದ್ರೇಗೌಡ ಹದಿನೈದಿಪ್ಪತ್ತು ಮಂದಿ ಜೊತೆ ಅಲ್ಲಿಗೆ ಬಂದ. ಚಂದ್ರಪ್ಪನ ಬೈದಾಟಕ್ಕೆ ರೇಗಿ ಮೆಟ್ಟಿಗೆ ಹೇಲು ಹಚ್ಚಿಕೊಂಡು ಬರಲು ಹೇಳಿದ.

---

**ಬುಲ್ಗಾನಿನ್ ಥರ ಗಡ್ಡ ಬಿಟ್ಟಿದ್ದ ರವಿಶಂಕರೆಗೌಡನ ಕಂಡು ಗೃಹಸಚಿವೆ ಜಾಲಪ್ಪ 'ರೌಡಿಥರ, ಭಯೋತ್ಪಾದಕನ ಥರ ಕಾಣುತ್ತಿ' ಎಂದು ವ[illegible]ದರು. ಆನೇಲೆ ಆ ಗಡ್ಡ ಅಲ್ಲಿಂದ ಮಾಯವಾಯ್ತು.**

**ಸರ್ಕಾರ ಇದುವರೆಗೂ ಮಾಡಿರುವ ಏಕೈಕ ಕಾರ್ಯ ಎಂದರೆ ರವಿಶಂಕರನ ಗಡ್ಡಕ್ಕೆ ಕೈ ಹಾಕಿರೋದು!**

---

ನಂತರ ಚಂದ್ರಪ್ಪನ ಕಂಬಕ್ಕೆ ಕಟ್ಟಿ ಅವನ ಬಾಯಲ್ಲಿ ಹೇಲು ಹಚ್ಚಿದ ಮೆಟ್ಟು ಇಟ್ಟರು, ಹೊಡೆದರು. ಸ್ವಲ್ಪ ಹೋದ ನಂತರ ನಾನೇ ಹೋಗಿ ಅದನ್ನ ಅವನ ಬಾಯಿಂದ ತೆಗೆದೆ. ಗುತ್ಯಪ್ಪ ಹಗ್ಗ ಬಿಚ್ಚಿದ. ಹಗ್ಗಕ್ಕೆ ನೀರು ಹಣಿಸಿದ್ದರಿಂದ ಅದು ಬಿಗಿಯುತ್ತಿತ್ತು. ಚಂದ್ರಪ್ಪ ಬಟ್ಟೆಯ ಮೇಲೆಲ್ಲಾ ವಾಂತಿ ಮಾಡಿಕೊಂಡಿದ್ದ.

ಮರುದಿನ ಮುಂಜಾನೆ ಚಂದ್ರಪ್ಪ ಗಂಗಾಮತಸ್ಥನಾದ ರಾಮಚಂದ್ರನ ಕೈಯಲ್ಲಿ ಪೊಲೀಸರಿಗೆ ಮತ್ತು ಮಂಡಲ ಪಂಚಾಯಿತಿಯ ಪ್ರಧಾನರಿಗೆ ದೂರು ಬರೆಸಿಕೊಟ್ಟ. ಈ ಎರಡು ದೂರುಗಳಲ್ಲಿ 'ಮಲ ತಿನ್ನಿಸಲು ಪ್ರಯತ್ನ ಪಟ್ಟರು' 'ಮಲವನ್ನು ತಿನ್ನುವಂತೆ ಬಲವಂತ ಮಾಡುತ್ತಿದ್ದರು ಎಂಬ ಹೇಳಿಕೆಗಳಿಂದಾಗಿ ಇಡಿ ಘಟನೆಯೇ ವಿವಾದಾಸ್ಪದವಾಗಿಬಿಟ್ಟಿದೆ. ಯಾಕೆ ಹೀಗೆ ಬರೆದಿ ಎಂದು ಕೇಳಿದಾಗ ಆತ ಹೀಗೆ ಹೇಳಿದ : "ಏನು ಬರದೀನಿ ನನಗೆ ನೆನಪಿಲ್ಲಾರಿ. ಮನಸ್ಸಿಗೆ ಭಾಳ ಬೇಸಿಗೆಯಾಗಿ ಆ ಪಾಯಿಂಟು ಬರಯೋದು ಬಿಟ್ಟೇರಿ. "

ಸೂರ್ಯ ಪಶ್ಚಿಮಕ್ಕೆ ವಾಲುತ್ತಿದ್ದ. ಯಾರಿಗೂ ಉಪವಾಸದ ಅನುಭವವೇ ಆಗದಷ್ಟು ಘಟನೆಯ ವಿವರಗಳು ಇಡೀ ತಂಡದವರನ್ನ ಆವರಿಸಿಕೊಂಡಿದ್ದವು. ಎಂ.ಬಿ. ನಟರಾಜ್ ಹೀಗೊಂದು ಚಟಾಕಿ ಹಾರಿಸಿದರು. "ಶಿವಮೊಗ್ಗದ ಹತ್ರ ಹಾಲ್ ಮತ್ತೂರ್ ಇದೆ. ಈ ಹಳ್ಳಿಗೆ ಹೇಲ್ ತತ್ತೂರ್ ಅಂತ ಪುನರ್ನಾಮಕರಣ ಮಾಡಿಬಿಡೋಣ". ಎಲ್ಲರೂ ನಕ್ಕೂ ನಕ್ಕೂ ಸುಸ್ತಾದರು.. ಅಷ್ಟರಲ್ಲಿ ರವಿಶಂಕರೇಗೌಡನ ಮನೆಯ ಜೀತದ ಹುಡುಗ ಗುತ್ಯ ಎಲ್ಲಿಂದಲೋ ಬಂದವನೆ ಹಲಗೆ ಇಸ್ಕೊಂಡು ಲಯಬದ್ಧವಾಗಿ ಆರೆಂಟು ಮಟ್ಟುಗಳನ್ನು ಬಾರಿಸಿದ. ಹನ್ನೆರಡು ವರ್ಷದ ಗುತ್ಯ 4 ವರ್ಷಗಳಿಂದಲೂ ವರ್ಷಕ್ಕೆ 100 ರೂಪಾಯಿಗೆ ಜೀತಕ್ಕೆ ಇದ್ದಾನೆ ಅಲ್ಲಿ. ಅವನು ಹೀಗೆ ಬಂದದ್ದನ್ನು ಒಂದು ಸಾಂಕೇತಿಕ ಘಟನೆ" ಎಂದರು ತರೀಕೆರೆ ರಹಮತ್. "ಅವನ ಜೊತೆ ನೀಲಪ್ಪ (16) ಮಂಜ (10) ಎಂಬ ಹುಡುಗರೂ ಜೀತಕ್ಕಿದ್ದಾರಂತೆ ಅಲ್ಲಿ.

ಸಂಜೆ ಪ್ಲಕಾರ್ಡು ಹಿಡಿದ ಚಂದ್ರಪ್ಪನನ್ನ ಮುಂದೆ ಇಟ್ಟುಕೊಂಡು ಉಪವಾಸ ತಂಡದವರು ತತ್ತೂರಿನ ಕೇರಿ ಕೇರಿಗಳಲ್ಲಿ [illegible]. [illegible] ಕರಪತ್ರ[illegible] ಮನೆಮನೆಗೆ [illegible] ನೆಲಕೆ [illegible] ಯಲ್ಲಿ [illegible] ಅವನ ಕಾಲು [illegible] ಜೊತೆ ಬೆರೆತು ತತ್ತೂರಿನ [illegible] ಯನ್ನ ಹರಡಿತು.

ಹಿಂದೊಮ್ಮೆ ಚಂದ್ರಪ್ಪ [illegible] ಪ್ರತಿಭಟನೆಯ ಫಲಕವನ್ನು ರವಿಶಂಕರೆಗೌಡ ಸುಡಿಸಿ ಹಾಕಿದನಂತೆ. ಈ ಸಾರಿ ಅದನ್ನ ಅವನು ದಿಟ್ಟವಾಗಿ ಎತ್ತಿ ಹಿಡಿದು ನಡೆದು ಹೋದಾಗ ಗೌಡರ ಮನೆ ಹೆಬ್ಬಾಗಿಲು ಹಾಕಿತ್ತು. ಹೆದರಿದ ಹೆಂಗಸರು ಮತ್ತಿತರರು ಮನೆಯ ಮಹಡಿ ಸಂದುಗಳಿಂದ ಮೆರವಣಿಗೆಗೆ ಕಣ್ಣಾಗಿದ್ದರು. ಜೀತದಾಳು ಗುತ್ಯ ನ ಗುತ್ತ ಕರಪತ್ರಗಳನ್ನು ಇಸ್ಕೊಂಡು ಗೌಡರಿಗೆ ಕೊಡಲೆಂದು ಓಡಿದ. ಮೆರವಣಿಗೆ ನಂತರ ಚಂದ್ರಪ್ಪ ಫಲಕವನ್ನ ಎತ್ತರದ ಮರದ ಮೇಲು ಕೊಂಬೆಗೆ ಕಟ್ಟಿದ, ಊರ ದಲಿತರು ಶರಬತ್ತು ನೀಡುವುದರ ಮೂಲಕ ತಂಡದವರ ಉಪವಾಸಕ್ಕೆ ಕೊನೆಹಾಡಿದರು. ●

---


## PANCHAMA

(Form IV Sec Rule 8.)

| | | |
|---|---|---|
| 1. Place of Publication | - | Bangalore, Karnataka State |
| 2. Periodicity of Publication | - | Fortnightly |
| 3. Printer's Name | - | Rangaswamy Belladamadu |
| Whether the Citizen of India | - | Yes |
| 4. Editor's Name | - | K. Ramaiah |
| Whether the Citizen of India | - | Yes |
| 5. Name and address of individuals who own the News paper and Partners or share holder, holding more than one percent of the capital. | | 1. H. Govindaiah<br>2, Indudhara Honnapura<br>3. Shivaji Ganeshan<br>4. Shivamalla Devanur<br>5, Ramadeva Rake |

2B, Mahadeswara Nilaya, 2nd Cross, 2nd Main,
A.K. Colony Hosalli. Bangalore-560040

Rangaswamy Belladamadu, here by declare that the Particulars above are true to the best of my Knowledge and belief.

Place—Bangalore
Date--2-3-88

(Sd) Rangaswamy Belladamadu
Signature of the Publisher.

## ಜಲಮಂಡಳಿಯಲ್ಲಿ ಜಾತಿ ಕ್ರಿಮಿಗಳು:

# ಶಿವರಾಂ ಮೇಲೆ ಹಲ್ಲೆ ಕೊಲೆ ಯತ್ನ

**ನೀರಿನಂಥ ಸರಳ ಸ್ವಭಾವದ ಶಿವರಾಂ ನಗರದ ಜಲಮಂಡಳಿಯಲ್ಲಿ 20 ವರ್ಷಗಳಿಂದ ದುಡಿಯುತ್ತಿರುವ ದಲಿತ ನೌಕರ. ಈತನನ್ನು ನುಂಗಿಸಿ ಬಿಡಲು ಹಿಂದೊಮ್ಮೆ ಸೂಟಿಕೇಸಿನಲ್ಲಿ ಹಾವು ಇಟ್ಟು ಕಾಣಿಕೆ ಕೊಟ್ಟರು. ಈಗ ತಮ್ಮ ಎದೆಗಳಲ್ಲಿ ಬಚ್ಚಿಟ್ಟುಕೊಂಡ ಮಚ್ಚು ಕೊಡಲಿ ಎತ್ತಿದ್ದಾರೆ.**

ಫೆಬ್ರವರಿ 6, 1988ರ ಶನಿವಾರ ಸಂಜೆ ಸುಮಾರು 5–15ರ ಸಮಯ. ಮಲ್ಲೇಶ್ವರ 18ನೇ ಕ್ರಾಸ್ ಬಸ್‌ನಿಲ್ದಾಣದ ಹಿಂಭಾಗ ಜಲಮಂಡಳಿ ಕಛೇರಿಗೆ ಹೋಗುವ ದಾರಿ. ಅಲ್ಲಿ ತನ್ನ ಮೋಟಾರ್‌ಬೈಕ್ ಸ್ಟಾರ್ಟ್‌ಮಾಡಲು ಹೊರಟ ವ್ಯಕ್ತಿಯ ಮೇಲೆ ಬಸ್ ಸ್ಟ್ಯಾಂಡ್ ಬಳಿಯಿಂದ ಬಿರುಗಾಳಿ ವೇಗದಂತೆ ಬಂದ ವ್ಯಕ್ತಿ ಬಲಗೆನ್ನೆ ಹಾಗೂ ಭುಜಕ್ಕೆ ರೆಜೇರಿನಿಂದ ಇರಿದ. ಆ ಏಟುಗಳನ್ನು ತಪ್ಪಿಸಿಕೊಳ್ಳುವ ಸಮಯ ಸ್ಫೂರ್ತಿಯಿಂದ ಹಿಂದಕ್ಕೆ ತಿರುಗಿದಾಗ ಮತ್ತೊಬ್ಬ ವ್ಯಕ್ತಿ ಮಚ್ಚನ್ನು ಎತ್ತಿ ಹಿಡಿದು ಇವರತ್ತ ಧಾವಿಸಿ ಬಂದು ಎಳನೀರು ಕೊಚ್ಚುವಂತೆ ಕುತ್ತಿಗೆಯನ್ನು ಕೊಚ್ಚಲು ಹಾಕಿದ ಏಟು ಅವರು ಧರಿಸಿದ ಹೆಲ್ಮೆಟ್‌ಗೆ ಬಿದ್ದು ಬಲಗೈಯ ತುದಿಯಲ್ಲಿ ಹರಿತವಾದ ಗಾಯ. ನಂತರ ಮತ್ತೆ ಅದೇ ಮಚ್ಚನ್ನು ಎತ್ತಿ ಹೊಡೆಯಲು ಹವಣಿಸಿದಾಗ ತನ್ನ ಎಡಗೈನಿಂದ ಆ ಏಟನ್ನು ತಡೆಯಲು ಹೋಗಿ ಎಡಗೈಗೆ ಮಚ್ಚಿನಿಂದ ಹರಿತವಾದ ಗಾಯ. ರಕ್ತ ಧಾರಾಕಾರವಾಗಿ ಕೆನ್ನೆ ಕೈಯಿಂದ ಹರಿಯಿತು. ಅಮಾನುಷ ಹೀನ ಕೃತ್ಯವನ್ನು ನೆರೆದಿದ್ದ ನೂರಾರು ಜನಗಳು ಮೂಕ ಪ್ರೇಕ್ಷಕರಾಗಿ ನೋಡುತ್ತಿದ್ದರೆ ವಿನಹ ಯಾರೂ ಈ ದುಷ್ಕರ್ಮಿಗಳನ್ನು ಹಿಡಿಯುವ ಸಾಹಸ ಮಾಡಲಿಲ್ಲ. ಈ ಭೀಕರ ಕೃತ್ಯ ಕಣ್ಮುಚ್ಚಿ ತೆರೆಯುವಷ್ಟರಲ್ಲಿ ನಡೆದುಹೋಗಿತ್ತು.

ಈ ಹಲ್ಲೆಗೆ ಒಳಗಾದ ವ್ಯಕ್ತಿ ಬೆಂಗಳೂರು ಜಲಮಂಡಲಿಯಲ್ಲಿನ ದಲಿತ ನೌಕರ ಎಲ್.ಶಿವರಾಂ ಇವರು ಸುಮಾರು ಇಪ್ಪತ್ತೈದು ವರ್ಷಗಳಿಂದ ಈ ಜಲಮಂಡಳಿಯಲ್ಲಿ ಕಾರ್ಯನಿರತರಾಗಿದ್ದಾರೆ.

ಒಳ್ಳೆ ನಿಲುವಾದ ಎತ್ತರ. ದೃಢವಾದ ಕಾಯ, ಮೊದಲ ನೋಟಕ್ಕೆ ಎಲ್ಲರ ಗಮನ ಸೆಳೆವ ವ್ಯಕ್ತಿತ್ವ. ಇವರು ತಮ್ಮ ವಿದ್ಯಾಭ್ಯಾಸ ಕಾಲದಿಂದ ಛಲಗಾರಿಕೆಯನ್ನು ರೂಢಿಸಿಕೊಂಡು ಬಂದವರು. ಬೆಂಗಳೂರು ಜಲಮಂಡಳಿಯಲ್ಲಿ ಹರಿಜನ ಗಿರಿಜನ ನೌಕರರನ್ನು ಒಂದುಗೂಡಿಸಲು ಪ್ರಮುಖಪಾತ್ರ ವಹಿಸಿ ಹರಿಜನ ಗಿರಿಜನ ನೌಕರರ ಕ್ಷೇಮಾಭಿವೃದ್ಧಿ ಸಂಘವನ್ನು ಸ್ಥಾಪಿಸಿ ಪ್ರಧಾನ ಕಾರ್ಯದರ್ಶಿಯಾದರು.

ಈ ಸಂಘದ ವತಿಯಿಂದ ಮತ್ತೆ ಹರಿಜನ ಗಿರಿಜನರಿಗೋಸ್ಕರ ಗೃಹನಿರ್ಮಾಣ ಸಂಘವನ್ನು ಸ್ಥಾಪಿಸಲು ಉದ್ದೇಶಿಸಿ ನಂತರ ಇವರ ವಿಶಾಲ ಮನೋಭಾವದಿಂದ ಮಂಡಳಿಯ ಎಲ್ಲಾ ನೌಕರರು ಬೆಂಗಳೂರಿನಲ್ಲಿ ಸ್ವಂತ ಮನೆ ಮಾಡಿಕೊಳ್ಳುವಂತೆ ಹರಿಜನ ಗಿರಿಜನ ಹಾಗೂ ಹಿಂದುಳಿದ ವರ್ಗದ ನೌಕರರ ಕಾವೇರಿ ಗೃಹ ನಿರ್ಮಾಣ ಸಂಘವನ್ನಾಗಿ ಮಾರ್ಪಡಿಸಿದರು, ಇದು ಇತರ ಸಂಘಗಳಿಗಿಂತಲೂ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ.

ಈ ಮಧ್ಯೆ ನೌಕರರ ಸಂಘದಲ್ಲಿ ಕೆಲವು ಪದಾಧಿಕಾರಿಗಳು ತಮ್ಮ ಸ್ವಾರ್ಥ ಸಾಧನೆಗೋಸ್ಕರ ಸಂಘವನ್ನು ಬಳಸಿಕೊಂಡು ಮಂಡಳಿಯಲ್ಲಿ ನಡೆಯಬಾರದ ಅವ್ಯವಹಾರ, ಬೆದರಿಕೆ, ಹಲ್ಲೆಗಳನ್ನು ನೌಕರರ ವರ್ಗದವರ ಮೇಲೆ ಮಾಡುತ್ತ ದುಷ್ಟ ಶಕ್ತಿಗಳಾಗಿ ಬೆಳೆದರು. ಇದು ಸಾಲದೆಂಬಂತೆ ಒಂದು ಪತ್ರಿಕೆಯನ್ನು ಪ್ರಕಟಿಸುತ್ತಾ, ಆ ಪತ್ರಿಕೆಯಲ್ಲಿ ಇವರ ವಿರುದ್ಧ ಮಾತನಾಡುವ ನೌಕರರ ಮೇಲೆ ಅತ್ಯಂತ ಕೀಳು ಮಟ್ಟದ ಭಾಷೆಯನ್ನು ಬಳಸಿ ಅವರ ವ್ಯಕ್ತಿತ್ವವನ್ನು ತೇಜೋವಧೆ ಮಾಡಿರುತ್ತಾರೆ.



(ಮಚ್ಚಿನ ಹೊಡೆತಕ್ಕೆ ಈಡಾದ ಶಿವರಾಂ)

ಈ ಮಧ್ಯೆ ನೌಕರರ ಸಂಘದ ಚುನಾವಣೆಯು ದಿನಾಂಕ 1.8.87ರಂದು ನಡೆದು ಎಲ್. ಶಿವರಾಂ ಅವರು ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ನಿಂತಿದ್ದು ಇವರ ಗುಂಪು ಬಹುಮತದಿಂದ ಆಯ್ಕೆಯಾಗುವ ಸಂಭವವಿತ್ತು. ಚುನಾವಣಾಧಿಕಾರಿ ಸಂಚಿನಿಂದ ಫಲಿತಾಂಶವು ಪಟ್ಟಭದ್ರಹಿತಾಸಕ್ತಿಗಳ ಪರ ಆಯಿತು. ಈ ಚುನಾವಣೆ ನಡೆದಿರುವ ರೀತಿಯನ್ನು ಶಂಕಿಸಿದ ಶಿವರಾಂ ಅವರು ಚುನಾವಣಾಧಿಕಾರಿ ವಿರುದ್ಧ ಈ ಬಗ್ಗೆ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿದರು.

ಇದಾದ ನಾಲ್ಕು ತಿಂಗಳನಂತರ ಹರಿಜನ ಗಿರಿಜನ ಹಾಗೂ ಹಿಂದುಳಿದ ವರ್ಗಗಳ ಕಾವೇರಿ ಗೃಹ ನಿರ್ಮಾಣ ಸಹಕಾರ ಸಂಘದ ಚುನಾವಣೆ ನಡೆದಿದ್ದು ಈ ಚುನಾವಣೆಗೆ ಯಾವುದೇ ರೀತಿಯ ಸಂಬಂಧವಿರದಪಟ್ಟಭದ್ರಹಿತಾಸಕ್ತಿಗಳುಸಂಘವನ್ನ ತಮ್ಮ ವಶಕ್ಕೆ ತೆಗೆದುಕೊಳ್ಳುವ ದುರುದ್ದೇಶದಿಂದ ದಿಂದ ತುಂಬಾ ಆಸಕ್ತಿ ವಹಿಸಿ ಸಂಘದ ಸದಸ್ಯರಲ್ಲಿ ತಮ್ಮ ಕಡೆಯವರನ್ನು ಹುಡುಕಿ, ಅವರಿಗೆ ಚುನಾವಣೆಯಲ್ಲಿ ಸ್ಪರ್ಧಿಸುವ ಆಸಕ್ತಿ ಇರದಿದ್ದರೂ ಸತ್ಯಲ್ಲಿ ಸ್ಪರ್ಧಿಸುವಂತೆ ಪ್ರೇರೇಪಿಸಿ ಅವರ ಪರವಾಗಿ ಚುನಾವಣಾ ಪ್ರಚಾರಮಾಡಿದರು. ಆದರೆ ಚುನಾವಣೆಯಲ್ಲಿ ಶಿವರಾಂ ಅವರ ಗುಂಪಿಗೆ ಪ್ರಚಂಡ ಜಯದೊರೆತಿದ್ದು ಈ ಪಟ್ಟಭದ್ರಹಿತಾಸಕ್ತಿಗಳಿಗೆ ಮುಖಭಂಗವಾಯಿತು.

ಪ್ರತಿ ಹೆಜ್ಜೆಗೂ ತಮಗೆ ಯಾವುದೇ ರೀತಿ ಸಂಬಂಧವಿಲ್ಲದಿದ್ದರೂ ಸಹ ಹರಿಜನ ಗಿರಿಜನ ಹಿಂದುಳಿದ ಅಲ್ಪಸಂಖ್ಯಾತ ನೌಕರರ ವಿರುದ್ಧ ಕತ್ತಿ ಮಸೆಯುತ್ತಾ ಕಿರುಕುಳ ನೀಡುವುದು ಈ ದುಷ್ಕರ ಕಾಯಕ.

ಈ ಪಟ್ಟಭದ್ರ ಹಿತಾಸಕ್ತಿಗಳ ಅವ್ಯವಹಾರ, ಬೆದರಿಕೆ ಹಾಗೂ ಹೀನಕೃತ್ಯವನ್ನು ಪ್ರತಿ ಹಂತದಲ್ಲೂ ಪ್ರತಿಭಟಿಸಿ ಬರುತ್ತಿದ್ದ ದಲಿತ ನೌಕರ ಶಿವರಾಂ ಅವರ ಪ್ರಗತಿಯನ್ನು ಸಹಿಸದ ಈ ಮೇಲುಸ್ತರ ವರ್ಗದವರು ಕೊನೆಗೆ ಅವರನ್ನು ಹತ್ಯೆ ಮಾಡಲು ಒಳಸಂಚು ನಡೆಸಿ ತೀವ್ರವಾಗಿ ಹಲ್ಲೆ ಮಾಡಿರುತ್ತಾರೆ. ದಲಿತನೊಬ್ಬನ ಏಳ್ಗೆಯನ್ನು ಸಹಿಸದ ಈ ಪಟ್ಟಭದ್ರಹಿತಾಸಕ್ತ ಜನಗಳಿಗೆ ಮಂಡಳಿಯ ಪರಿಶಿಷ್ಟಜಾತಿ ಹಾಗೂ ಹಿಂದುಳಿದ ಅಲ್ಪಸಂಖ್ಯಾತ ವರ್ಗದವರು ಮತ್ತಿತರರು ಒಟ್ಟುಗೂಡಿ ಈ ಹಲ್ಲೆಯನ್ನು "ಧರಣಿ ಸತ್ಯಾಗ್ರಹ" ಮಾಡುವುದರ ಮೂಲಕ ಪ್ರತಿಭಟಿಸಿದ್ದಾರೆ.

●ಸಂಪಿಗೆ ಶಿವಪ್ರಕಾಶ

### ಸ್ವಾಭಿಮಾನಿ ಬಜಾರಪ್ಪನ ಕಗ್ಗೊಲೆ:

# ಜಾತೀಯತೆಯ ಬರ್ಬರ ಕೃತ್ಯ

**ಅಸಮಾನತೆಯೇ ಸಹಜ ಬದುಕಿನ ಮೌಲ್ಯವಾಗಿರುವ ಭಾರತೀಯ ಸಮಾಜದಲ್ಲಿ ಸಮಾನತೆ ಸಹೋದರತೆ, ಪರಸ್ಪರ ಪ್ರೀತಿ, ಗೌರವದ ಬದುಕಿಗೆ ಹಂಬಲಿಸುವ ಪ್ರತಿ ಪ್ರಯತ್ನವೂ ತಮ್ಮನ್ನು ತಾವೇ ಮೇಲು ಎಂದು ಕರೆದುಕೊಂಡು ಬೀಗುತ್ತಿರುವವರ ಕಣ್ಣಿಗೆ ಅಸಹಜವಾಗಿ ಘೋರವಾಗಿ ಕಾಣುತ್ತದೆ.**

**ಮಾನವೀಯ ಮೌಲ್ಯಗಳುಳ್ಳ ಸಮಾಜ ರೂಪಿಸಲು ಹಂಬಲಿಸುವ ಎಲ್ಲ ಯತ್ನಗಳನ್ನು ಕ್ರೂರವಾಗಿ ಈ ನೀಚ ಮನಸ್ಸು ಹತ್ತಿಕ್ಕ ಬಯಸುತ್ತದೆ. ತಮ್ಮ ಇಂಥ ಕ್ರೌರ್ಯದಿಂದ ದಲಿತರ ಚೈತನ್ಯವನ್ನು ಮಸುಕಾಗಿಸಬಹುದು ಎಂದು ತಿಳಿದಿರುವ ಸವರ್ಣೀಯರು ಜೀವ ತೆಗೆದು ರಕ್ತ ಹರಿಸುತ್ತಿದ್ದಾರೆ. ಹೀಗೆ ಕೇವಲ ಶರೀರವನ್ನಷ್ಟೇ ಇಲ್ಲವಾಗಿಸಬಲ್ಲರೇ ಹೊರತು ದಲಿತರೆಲ್ಲರ ನರನಾಡಿಗಳಲ್ಲಿ ಹರಿಯುತ್ತಾ ಸಾಗಿರುವ ಚೈತನ್ಯವನ್ನಲ್ಲ.**

**ಮೊನ್ನೆತಾನೆ ರಾಯಚೂರು ಬಳಿಯ ಖಾನಾಪುರದ ದಲಿತ ಬಜಾರಪ್ಪ ಸವರ್ಣೀಯರ ಇಂಥ ಕ್ರೌರ್ಯಕ್ಕೆ ಬಲಿಯಾಗಿದ್ದಾನೆ. ಚಹ ಕೇಳಿದ್ದು, ನೀರು ಮುಟ್ಟಿದ್ದು, ಒಳ್ಳೆ ಬಟ್ಟೆ ತೊಟ್ಟಿದ್ದೇ ಬಜ್ಜಾರಪ್ಪನ ಕೊಲೆಗೆ ಕಾರಣ. ಒಂದು ಜನಾಂಗದ ಸ್ವಾಭಿಮಾನಿ ಹೋರಾಟದ ಕತೆ ಹಾಗೂ ಅದಕ್ಕಾಗಿ ಅವರ ತೆತ್ತ ಬೆಲೆಯ ಸಮಗ್ರ ವರದಿ ಇಲ್ಲಿದೆ.**

ಫೆ. 6ರ ಶನಿವಾರ. ಸಂಜೆ 7ಗಂಟೆ. ರಾಮಸ್ವಾಮಿಯ ಗುಡಿಸಲು ಹೋಟೆಲಿಗೆ ಬಜಾರಪ್ಪ, ಸಣ್ಣ ಆಂಜನೇಯ ಹಾಗೂ ತಾಯಪ್ಪ ಎಂಬ ಮೂವರು ದಲಿತರು ಚಹ ಕುಡಿಯಲು ಹೋದರು. ಹೋಗಿ ಚಹ ಕುಡಿಯಲು ಬೇರೆಯವರ ಜೊತೆ ಕುಳಿತರು. ಅಲ್ಲಿದ್ದ ಕೆಲವು ಜನ ಸವರ್ಣೀಯರು ಅವರನ್ನು ಅವಹೇಳನ ಮಾಡಿದರು.

'ಹೀಗೇಕೆ ಮಾಡುವಿರಿ ?' ಎಂದು ಬಜಾರಪ್ಪ ಕೇಳಿದ್ದಕ್ಕೆ ಡಾ॥ ಸೂರ್ಯನಾರಾಯಣ ಎನ್ನುವ ಜಾತಿಯ ಕ್ಯಾನ್ಸರ್ ರೋಗದ ಕ್ರಿಮಿ ಆತನ ಮರ್ಮಾಂಗಕ್ಕೆ ಒದ್ದ. ಗೆಜ್ಜಲಯ್ಯ ಎಂಬಾತ ಆತನ ಕತ್ತು ಹಿಚುಕಿದ. ಇತರ ಹತ್ತು ಜನ ಸತತವಾಗಿ ಬಜಾರಪ್ಪನ ಮೇಲೆ ಹಲ್ಲೆ ನಡೆಸಿದರು. ಆತ ಕುಸಿದು ಬಿದ್ದ.

ಹೋಟೆಲ್‌ನಲ್ಲಿ ಸತ್ತು ಬಿದ್ದಿದ್ದ ಬಜಾರಪ್ಪನ ಮೃತ ದೇಹವನ್ನು ರಸ್ತೆಯ ಮೇಲೆ ಎಸೆಯಲಾಯಿತು. ಆಗ ಅಲ್ಲಿ ಕಟ್ಟೆಗಳ ಮೇಲೆ ಕುಳಿತಿದ್ದ ಜನರು "ಇನ್ನೂ ಸತ್ತಿರಲಿಕ್ಕಿಲ್ಲ ಚೆನ್ನಾಗಿ ಹೊಡೆಯಿರಿ" ಎಂದು ಪ್ರಚೋದಿಸಿದರು. ಮೃತ

## ಉರುಕುಂದಪ್ಪ

ದೇಹದ ಮೇಲೆ ಮತ್ತೆ ದಾಳಿ ನಡೆಯಿತು. ಮೃತನ ಹೊಟ್ಟೆ ಮತ್ತು ಎದೆಗೆ ಮನ ಬಂದಂತೆ ಒದೆಯಲಾಯಿತು.

ಬಜಾರಪ್ಪನ ಜತೆಯಲ್ಲಿದ್ದ ಆಂಜನೇಯ, ತಾಯಪ್ಪ, ಹೆದರಿ ಓಡುತ್ತಾ ಕಾಲೋನಿಗೆ ಬಂದು ಮನೆಯವರಿಗೆ ಸುದ್ದಿ ಮುಟ್ಟಿಸಿದರು. ಗಾಬರಿಯಾಗಿ ನಿಂತ ನಿಲುವಲ್ಲೇ ಓಡಿ ಹೋಗಿ ನೋಡಲಾಗಿ ಅಲ್ಲಿ ಬಜಾರಪ್ಪ ಬೀದಿಯಲ್ಲಿ ಹೆಣವಾಗಿ ಬಿದ್ದಿದ್ದ. ಜೀವ ಯಾವಾಗಲೋ ಹಾರಿಹೋಗಿತ್ತು. ಮನುಷ್ಯತ್ವ ಸತ್ತ ಸೂತಕದ ಊರಲ್ಲಿ ಕತ್ತಲೂ ಕವಿದಿತ್ತು.

ಆಮೇಲೆ ತಾಯಪ್ಪ 20 ಜನರ ಮೇಲೆ ದೂರು ಕೊಟ್ಟ. ಇವರ ಪೈಕಿ 17 ಜನರನ್ನು ಮಾತ್ರ ಪೊಲೀಸರು ಬಂಧಿಸಿದರು. ಉಳಿದ ಮೂವರು ತಲೆ ತಪ್ಪಿಸಿಕೊಂಡರು. ಇತ್ತ ದಲಿತರು ಕಣ್ಣೀರು ಸುರಿಸುತ್ತಾ ಬಜಾರಪ್ಪನ ಅಂತ್ಯಕ್ರಿಯೆ ಮಾಡಿ ಮುಗಿಸಿದರು.

ಉಡುಮಗಲ್ ಖಾನಪುರ ಗ್ರಾಮವು ರಾಯಚೂರಿನ ದಕ್ಷಿಣಕ್ಕೆ ಸುಮಾರು 10 ಕಿ.ಮಿ. ದೂರದಲ್ಲಿದೆ. ಬಹುಸಂಖ್ಯಾತ ಬೇಡರು, ಲಿಂಗಾಯತರು ಇರುವ ಊರಲ್ಲಿ ದಲಿತರವು 45 ಮನೆಗಳು ಮಾತ್ರ. ತಲೆಮಾರುಗಳ ಕಾಲದಿಂದ ದಲಿತರ ಆರ್ಥಿಕ, ಸಾಮಾಜಿಕ ಬದುಕು ಹೀನಾಯವಾಗಿಯೇ ಇದೆ. ಸವರ್ಣೀಯರು ಸತ್ತರೆ ಅವರನ್ನು ಹೂಳಲು ಕುಣಿ ತೋಡುವುದು, ತಮಟೆ

### ಆಮೆ ಕೊಂದ ಪವಿತ್ರ ಕತೆ.......

ಕೊಳವೆ ಬಾವಿ ಕೆಟ್ಟಿದ್ದರಿಂದ ದಲಿತರು ಊರಿನ ಸರ್ಕಾರಿ ಬಾವಿಯಲ್ಲಿ ನೀರು ಸೇದಿದರು. ಸಹಿಸದ ಸವರ್ಣೀಯರು ಹಲ್ಲೆ ಮಾಡಿದರು. ಕಾನೂನು ಕಣ್ಣು ಬಿಟ್ಟಿದ್ದರಿಂದ ದಲಿತರಿಗೆ ನೀರಿನ ಹಕ್ಕು ಸಿಕ್ಕಿತು. ಆದರೆ ಸವರ್ಣೀಯರ ಜಾತಿಯ ಸೊಕ್ಕು ಇದನ್ನು ಮನ್ನಿಸೀತೆ ?

ಮನ್ನಿಸದಿದ್ದರೂ ಏನೂ ಮಾಡುವಂತಿರಲಿಲ್ಲ. ಕೊಳವೆ ಬಾವಿ ರಿಪೇರಿಯಾದ ಮೇಲೆ ದಲಿತರೇ ಆ ಬಾವಿಯ ನೀರನ್ನು ಸೇದಲು ಹೋಗಲಿಲ್ಲ. ಆದರೆ ಅಸ್ಪೃಶ್ಯರು ಮುಟ್ಟಿದ ಬಾವಿಯ ನೀರನ್ನು ಸವರ್ಣೀಯರು ಮುಟ್ಟಿ ಕುಡಿಯುವುದಾದರೂ ಎಂತು ?

ಅದಕ್ಕೆ 'ಮೇಲುಜಾತಿ'ಯವರ ಮಿದುಳಿಗೆ ಒಂದು ಉಪಾಯ ಹೊಳೆಯಿತು. ಒಂದು ಆಮೆಯನ್ನು ಹಿಡಿದು ತಂದರು. ಅದನ್ನು ಕೊಂದು ಆ ಬಾವಿಗೆ ಎಸೆದರು. 'ದಲಿತರು ನೀರು ಮುಟ್ಟಿದ್ದರಿಂದ ಆಮೆ ಸತ್ತುಹೋಯಿತು ! ನೀರು ಮಲಿನವಾಯ್ತು ! ಅಪವಿತ್ರವಾಯಿತು !' ಎಂಬ ಪವಿತ್ರ ಕತೆ ಕಟ್ಟಿದರು. ಅದು ಅಷ್ಟಕ್ಕೇ ನಿಲ್ಲದೆ ಸತ್ತ ಆಮೆಯನ್ನೂ, ಆ ಬಾವಿಯ ನೀರನ್ನೂ ಸಂಪೂರ್ಣ ಎತ್ತಿಹಾಕಿ ಶುದ್ಧಿಮಾಡಿದರು. ತಮ್ಮ ಜಾತಿ ಪಾವಿತ್ರ್ಯ ಕಾಪಾಡಿಕೊಂಡರು! ಆವತ್ತಿನಿಂದ ನಾಪತ್ತೆಯಾದ ಆ ಸತ್ತ ಆಮೆ ಸ್ವಚ್ಛಗೊಳಿಸಿಕೊಳ್ಳದ ಸವರ್ಣೀಯರ ಮಲಿನ ಮನಸ್ಸುಗಳಲ್ಲೇ ಹೆಣವಾಗಿ ನೆಲೆ ನಿಂತಿದೆಯಂತೆ !

ಸಾಮಾಜಿಕ ಬದಲಾವಣೆಯೊಂದಿಗೆ ಹೆಜ್ಜೆ ಹಾಕದೆ, ಜತೆಗೆ ಇದ್ದಲ್ಲೂ ಇರದೆ ಹಿಂದಕ್ಕೆ ಮಧ್ಯಕಾಲದ ಬರ್ಬರತೆಯತ್ತ ಆ ಮನಸ್ಸು ವಾಲುತ್ತಿರುವುದನ್ನು ನೋಡಿದರೆ—ಆ ಸತ್ತ ಆಮೆ ನಿಜವಾಗಲೂ ಅವರ ಮನದಲ್ಲೇ ಇದ್ದಂತಿದೆ.

ಬಾರಿಸುವುದು ಮುಂತಾದ ಅವಮಾನದ ಬಿಟ್ಟಿ ಚಾಕರಿ ಇವರ ಕಸಬು. 'ಮೇಲು ಜಾತಿ'ಯವರ ಮನೆ ಜೀತ ಮಾಡುವುದು, ಅವರು ಹೇಳಿದಂತೆ ಕೇಳುವುದು ಇಷ್ಟು ಮಾತ್ರವೇ ತಮ್ಮ ಜೀವನದ ಸಾರ್ಥಕತೆ ಎಂಬುದು ದಲಿತರ ತಿಳುವಳಿಕೆ ಆಗಿತ್ತು. ಊರಿನ ಬಾವಿಯಲ್ಲಿ ನೀರು ಮುಟ್ಟುವಂತಿರಲಿಲ್ಲ, ದೇವಸ್ಥಾನಕ್ಕೆ ಹೋಗುವಂತಿರಲಿಲ್ಲ. ಚಹದ ಅಂಗಡಿಯಲ್ಲಿ ಚಹಾ ಕೇಳುವಂತಿರಲಿಲ್ಲ. ಬದಲಾವಣೆಯ ಗಾಳಿ ಬೀಸತೊಡಗಿದಂತೆ, ದ.ಸಂ.ಸ. ಕೂಗು ಹಳ್ಳಿ ಹಳ್ಳಿಗಳ ದಲಿತ ಕೇರಿಗಳನ್ನು ಮುಟ್ಟಿ ಮಾತಾಡಿಸತೊಡಗಿದಂತೆ ಇವರಲ್ಲೂ ಬೆಳೆಯತೊಡಗಿತ್ತು. ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧದ ಸೊಲ್ಲೂ ಕೇಳಿಬರತೊಡಗಿತು. ಸ್ವಾಭಿಮಾನ ಪ್ರತಿಭಟನೆಯ ರೂಪ ತಾಳಿತು.

ಮೊಟ್ಟಮೊದಲ ಬಾರಿಗೆ 18-10-85ರಂದು ದಲಿತರು ಅಸ್ಪೃಶ್ಯತೆಯ ವಿರುದ್ಧ ದನಿ ಎತ್ತಿದರು. ಕಾಲೋನಿಯ ಕೊಳವೆ ಬಾವಿ ಕೆಟ್ಟಿತ್ತು. ವಿಧಿಯಿಲ್ಲದೆ ಊರು ಮುಂದಿರುವ ಸರ್ಕಾರಿ ಬಾವಿಯಲ್ಲಿ ನೀರು ತುಂಬಲು ಹೋದರು. ಸವರ್ಣೀಯರು ಹಲ್ಲೆ ನಡೆಸಿದರು. ಪಿ.ಸಿ.ಆರ್. ಅನ್ವಯ ದೂರು ದಾಖಲಾಯಿತು. ದಲಿತರಿಗೆ ಬಾವಿಯ ನೀರು ತರುವ ಹಕ್ಕು ಸಿಕ್ಕಿತು. ಆಮೇಲೆ ಕೆಟ್ಟ ಕೊಳವೆ ಬಾವಿ ರಿಪೇರಿಯಾದ ನಂತರ ಇದನ್ನು ಕೈಬಿಟ್ಟರು. ಸವರ್ಣೀಯರು ಬಾವಿ ಮಲಿನವಾಯಿತೆಂದು ಭಾವಿಸಿ ನೀರನ್ನು ಸ್ವಚ್ಛಗೊಳಿಸಿಕೊಂಡರು. (ಬಾಕ್ಸ್ ನೋಡಿ) ಇದನ್ನು ಪ್ರತಿಭಟಿಸಿದ ದಲಿತರು ಅಂಬೇಡ್ಕರ್ ಜಯಂತಿ ಆಚರಿಸುವಾಗ ಇನ್ನೊಮ್ಮೆ ಆ ಬಾವಿಯ ನೀರು ಸೇದಿದರು.

## ಚಹ ಅಂಗಡಿಗೆ ಪ್ರವೇಶ

ದಲಿತರಿಗೆ ಇನ್ನೂ ಊರಿನ ಚಹದ ಹೋಟೆಲ್‌ಗಳು ಮುಕ್ತವಾಗಿರಲಿಲ್ಲ. ಇವರಿಗೆ ಬೇರೆ ಲೋಟಾ ಬೇರೆ ಸ್ಥಳ ಕಾಯ್ದಿರಿಸಲಾಗಿತ್ತು. ದಲಿತರಿಗೆ ಸಮಾನ ಉಪಚಾರ ಸಿಗಬೇಕೆಂದು ಹೋರಾಟ ನಡೆಸಿದಾಗ ಯರಗೇರಾ ಆರಕ್ಷಕ ಉಪ ನಿರೀಕ್ಷಕರು ಬಂದು ಹೋಟೆಲಿನಲ್ಲಿ ಸಮಾನಾವಕಾಶವನ್ನು ಒದಗಿಸಿಕೊಟ್ಟರು. ಆದರೂ ಸಹ ಗಿರಾಕಿಗಳಾಗಿ ಹೋಟೆಲ್‌ಗೆ ಬರುವ ಸವರ್ಣೀಯರು 'ಕಾಲು ಕಡಿಯುತ್ತೇವೆ. ಯಾರನ್ನಾದರೂ ಮುಗಿಸಿಬಿಡುತ್ತೇವೆ' ಎಂದು ತಮ್ಮ ಒಳಗಿದ್ದ ವಿಷಕಾರಿಕೊಳ್ಳುತ್ತಿದ್ದರು. ಯಾವುದಕ್ಕೂ ಸೊಪ್ಪು ಹಾಕದೆ ದಲಿತರು ಹೋಟೆಲ್‌ಗಳಲ್ಲಿ ಈ ಎರಡು ವರ್ಷಗಳ ಸಂಘರ್ಷದಿಂದಲೇ ಸಮಾನ ಉಪಚಾರವನ್ನು ಪಡೆಯುತ್ತಾ ಬಂದರು.

ಸರಕಾರ ಭೂ ಹೀನ ದಲಿತ ಕುಟುಂಬಗಳಿಗೆ ತಲಾ ಒಂದುಎಕರೆಯಂತೆ ಭೂಮಂಜೂರಾತಿ ನೀಡಿತು ಅಲ್ಲದೇ, ಜನತಾ ಮನೆಗಳು ಮತ್ತು ಇನ್ನಿತರ ಸರಕಾರದ ಅಭಿವೃದ್ಧಿ ಯೋಜನೆಗಳ ಫಲ ಒದಗಿಸಿತು. ಸವರ್ಣೀಯರಿಗೆ ಸಹಿಸಲಾಗಲಿಲ್ಲ ತಲೆಮಾರುಗಳಿಂದ ಬಂದಿರುವ ಜೀತ ಪದ್ಧತಿ ಬಿಟ್ಟಿಚಾಕರಿ ಕೆಲಸವನ್ನು ದಲಿತರು 1985ರ ಅವಧಿಗೆ ಧಿಕ್ಕರಿಸಿದರು. ಉಳಿದ ಸತ್ತ ದನ, ಕರುಗಳು, ಮತ್ತು ಕುಣಿ ತೋಡುವ ಕೆಲಸಗಳನ್ನು ಸವರ್ಣೀಯರೇ ಮಾಡಿಕೊಳ್ಳಲಿ, ಎಂಬ ಹೊಸ ಸೂತ್ರವನ್ನು ದಲಿತರು ಕಾರ್ಯರೂಪಕ್ಕೆ ತಂದರು. ಸ್ವಚ್ಛತೆ ಬಗ್ಗೆ ಗಮನ ಕೊಟ್ಟರು. ತಮ್ಮ ಬದುಕಿನ ಮಟ್ಟವನ್ನು ಬೆಳೆಸಿಕೊಂಡರು. ಯುವಕರು ಕಾಟನ್ ಬಟ್ಟೆಯ ಬದಲಾಗಿ ಒಳ್ಳೆಯ ದರ್ಜೆಯ ಟೆರಿಕಾಟ್ ಬಟ್ಟೆಗಳನ್ನು ತೊಡಲು ಪ್ರಾರಂಭಿಸಿದರು. ಮೈಮುರಿದು ತಮ್ಮ ಹೊಲಗಳಲ್ಲಿ ಕೆಲಸ ಮಾಡುತ್ತಾ ಬಂದರು. ಕೈಗೆ ಗಡಿಯಾರ ಬಂತು ಹಾಗೂ ಮನೆಗೊಂದು ರೇಡಿಯೋ ಬಂತು. ರಾತ್ರಿ ಶಾಲೆಯಲ್ಲಿ ಅಕ್ಷರ ಕಲಿತು ದಿನ ದಿನಕ್ಕೆ ಸುಧಾರಿಸುತ್ತ ಬಂದರು. 'ಮೇಲ್ಜಾತಿ'ಯ—ಸೋಮಾರಿ ಜನಾಂಗಕ್ಕೆ ಹೊಟ್ಟೆ ಉರಿಯಿತು. 'ಇಂದಿರಾ ಗಾಂಧಿ ಎಲ್ಲಾ ಹರಿಜನರಿಗೇ ಮಾಡುತ್ತಾಳೆ. ನಿಮಗೇನು ಮಾಡುವುದಿಲ್ಲ ಎಂದು ಲಿಂಗಾಯತರು ಬೇಡರಿಗೆ ಹೇಳುತ್ತ ಬಂದು ದಲಿತರ ವಿರುದ್ಧ ಅವರನ್ನು ಎತ್ತಿ ಕಟ್ಟಿದರು. ಹೆಂಡ ಕುಡಿಯಲಿಕ್ಕೆ ಹಣ ಕೊಟ್ಟು ದಲಿತರ ವಿರುದ್ಧ ಹಲ್ಲೆ ನಡೆಸಲು ಸಜ್ಜುಗೊಳಿಸುತ್ತಾ ಬಂದರು. ಅವರಿಂದ ಅವಾಚ್ಯ ಶಬ್ದಗಳನ್ನು ಹೇಳಿಸುತ್ತಾ 'ಹರಿಜನ ಮಕ್ಕಳಿಗೆ ಸೊಕ್ಕು ಬಂತು' ಎಂದು ಮನಸ್ಸಿಗೆ ವಿಷ ಬಿತ್ತಿದರು. ಬೇಡರಿಗೆ ಹೆಂಡ, ಕಂಡ, ತಿನಿಸಿ 'ಹೊಡದ ಅಂಗಡಿಗಳಲ್ಲಿ ದಲಿತರು ಸಿಕ್ಕರೆ, ಅವರನ್ನು ಕೊಲೆ ಮಾಡಿ ಮುಗಿಸಿಬಿಡಿರಿ, ನಾವು ಬಿಡಿಸಿಕೊಂಡು ಬರುತ್ತೇವೆ' ಎಂದು ಹೇಳಿ ಬೇಡರ ಗೆಜ್ಜಲೆಯ ಬುಜ್ಜಗಾಳ್ಳು ನರಸಪ್ಪ, ಪಸುಲು ಉರುಕುಂದನ ಮಗ ನರಸಪ್ಪ, ಬೊಡ್ಡು ತಾಯಪ್ಪ ಇವರಿಗೆ ತಲಾ ಒಂದು ಕ್ವಿಂಟಾಲ್ ಅಕ್ಕಿಯನ್ನು ಕೊಟ್ಟು ಕೊಲೆ ಮಾಡಲು ಛೂ ಬಿಟ್ಟರು.

## ಡಾ|| ಅಂಬೇಡ್ಕರ್ ಜಯಂತಿಯ ಕಾರ್ಯಕ್ರಮಗಳು

1984ರಲ್ಲಿ ದಲಿತರು ಅಂಬೇಡ್ಕರ್ ಜಯಂತಿಯ ಅಂಗವಾಗಿ ಮೆರವಣಿಗೆಯನ್ನು ಊರ ಪ್ರಮುಖ ರಸ್ತೆಗಳಲ್ಲಿ ತೆಗೆದುಕೊಂಡು ಹೋದರು. ಸವರ್ಣೀಯರು ಒಂದು ಎತ್ತನ್ನು ಮೆರವಣಿಗೆಯ ಮೇಲೆ ಛೂ ಬಿಟ್ಟಿದ್ದರಿಂದ ತುಳಿತಕ್ಕೆ ಸಿಕ್ಕ ದಲಿತ ಮಹಿಳೆಯೊಬ್ಬಳ ಕಾಲಿಗೆ ಮೂರು ತಿಂಗಳವರೆಗೂ ಮಾಯಲಾರದ ಗಾಯವಾಯಿತು.

(13ನೇ ಪುಟಕ್ಕೆ)

ಸವರ್ಣೀಯರ ಜಾತಿದ್ವೇಷಕ್ಕೆ ಬಲಿಯಾದ ಬಜಾರಪ್ಪ ಕೃಷಿ ಕೂಲಿಗಾರ. 28 ವರ್ಷದ ಈತ ಹೆಂಡತಿ ಜಂಬಲಮ್ಮ ಹಾಗೂ ಹೆಣ್ಣು ಮಗು ವಿಜಯಲಕ್ಷ್ಮಿ. ತಾಯಿ ಭೀಮಕ್ಕನನ್ನು ಬಿಟ್ಟು ಹೋಗಿದ್ದಾನೆ. ಈಗ ಒಟ್ಟು ಕುಟುಂಬದ ಹೊರೆ ತಮ್ಮನಾದ ಸಾಮೇಲಪ್ಪನ ರಟ್ಟೆಯ ಮೇಲಿದೆ.

ಇಡಿ ಊರಿನ ದಲಿತರ ಸ್ವಾಭಿಮಾನಿ ಚರಿತ್ರೆಯ ಭಾಗವಾಗಿದ್ದ ಬಜಾರಪ್ಪ ಒಂದು ದಿನ ಹೀಗೆ ಹೆಣವಾಗಿ ಉರುಳಿದ್ದು ಇಂಡಿಯಾದ ಬೇರಿಗೆ ಬಡಿದಿರುವ ಜಾತಿಯ ಕ್ಯಾನ್ಸರ್ ರೋಗದ ಇತ್ತೀಚಿನ ನಿದರ್ಶನ.

ಈ ಹಿಂದೆ 1985ರಲ್ಲಿ ಪ್ರಥಮ ಬಾರಿಗೆ ಬಜಾರಪ್ಪ ಚಹ ಕುಡಿಯಲು ಹೋಗಿದ್ದ. ಆಗ ಚಹ ನಿರಾಕರಿಸಲಾಯಿತು. ನಂತರ ಹೋಟೆಲಿನಲ್ಲಿದ್ದ ಡಾ|| ಸೂರ್ಯನಾರಾಯಣ ಬಜಾರಪ್ಪನನ್ನು ಚಪ್ಪಲಿಯಲ್ಲಿ ಹೊಡೆದಿದ್ದ. ಆ ನಂತರ 1987ರಲ್ಲಿ ಕೂಡ ಬಜಾರಪ್ಪ ಇನ್ನೊಮ್ಮೆ ಚಹಾ ಕೊಡುವಂತೆ ಒತ್ತಾಯಿಸಿ ಹೋಟೆಲ್‌ಗೆ ಹೋದ. ಆಗಲೂ ಸೂರ್ಯನಾರಾಯಣ ಮತ್ತು ರಾಮಸ್ವಾಮಿ, ಸತ್ಯಪ್ಪ ಇವರ ಮಧ್ಯೆ ಜಗಳವಾಯಿತು. ಮೂರೂ ಜನ ಸೇರಿಕೊಂಡು ಬಜಾರಪ್ಪನನ್ನು ಹೊಡೆದರು. ಎರಡು ಬಾರಿ ಹೊಡೆಸಿಕೊಂಡರೂ ಬಜಾರಪ್ಪ ದೂರು ಕೊಡಲಿಲ್ಲ ಹಾಗೂ ಹೋಟೆಲಿನಲ್ಲಿ ಚಹಾ ಒತ್ತಾಯಿಸುವ ತನ್ನ ಪ್ರಯತ್ನ ಬಿಡಲಿಲ್ಲ.



(ಸವರ್ಣೀಯರ ರಕ್ತದಾಹಕ್ಕೆ ಬಲಿಯಾದ ಬಜಾರಪ್ಪ)

ಈ ಮೂರನೆಯ ಬಾರಿಯೂ ಚಹಾ ಕೇಳಲು ಹೋದ ಬಜಾರಪ್ಪನನ್ನು ಸವರ್ಣೀಯ ರಾಕ್ಷಸಿ ಮನಸ್ಸು ಕೊನೆಯ ಬಾರಿ ಕೊಂದೇ ಹಾಕಿದೆ. ಆ ಮೂಲಕ ತನ್ನನ್ನು ತಾನೇ ಕೊಂದುಕೊಂಡಿದೆ. ಈಗ ದಲಿತರ ಪಾಲಿಗೆ ಉಳಿದಿರುವುದು ಈ ಸತ್ತ ಸವರ್ಣೀಯ ಮನಸ್ಸಿಗೆ ಅಂತ್ಯಕ್ರಿಯೆ ಮಾಡುವುದೋ ಅಥವಾ ಈ ಹೆಣದ ಒಳಗೂ ಜೀವ ಆಡಬಹುದೇ ಅಂತ ಕಾಯುವುದು?

### ತುರುವನೂರು:

# ಮೇಲ್ಜಾತಿ ರಕ್ಕಸರ ಮಾರಿ ಕುಣಿತ



ತುರುವನೂರು. ಚಿತ್ರದುರ್ಗ ತಾಲ್ಲೂಕಿನ ಒಂದು ಗ್ರಾಮ. ಸುಮಾರು 12 ಸಾವಿರ ಜನಸಂಖ್ಯೆಯನ್ನೊಳಗೊಂಡಿರುವ ಹೋಬಳಿ. ದಲಿತರು ಅಲ್ಪ ಸಂಖ್ಯಾತರಾಗಿರುವ ಈ ಹಳ್ಳಿಯಲ್ಲಿ 200 ದಲಿತರ ಮನೆಗಳು, 200 ಲಿಂಗಾಯಿತರ ಮನೆಗಳು, 500 ಕುರುಬರ ಮನೆಗಳು, 150 ಭೋವಿ ಮನೆಗಳು, 60 ನಾಯಕ ಜನಾಂಗದ ಮನೆಗಳು, 2 ಮುಸ್ಲಿಂ ಮನೆಗಳನ್ನು ಒಳಗೊಂಡಿರುವ ಆಧುನಿಕ ಗ್ರಾಮ. ಸವರ್ಣೀಯರ ಎಲ್ಲಾ ಕೋಮಿನ ಜನ ಒಂದೆಡೆ ಆದರೆ, ಬರೀ ದಲಿತರ ಮನೆಗಳು ಒಂದೆಡೆ ಆಗುವಂತೆ ಬೇರ್ಪಡಿಸಲಾಗಿದೆ.

ಕಳೆದ 70 ವರ್ಷಗಳಿಂದ ನಡೆಯುತ್ತಿದ್ದ ಮಾರಮ್ಮನ ಜಾತ್ರೆಯನ್ನು ಊರಿನ ಎಲ್ಲಾ ಕೋಮಿನವರು ಸೇರಿ ಈ ವರ್ಷ ಜನವರಿ 19,20,21,22 ರವರೆಗೂ ವಿಜೃಂಭಣೆಯಿಂದ ಆಚರಿಸಬೇಕೆಂಬ ತೀರ್ಮಾನದಂತೆ ಜಾತ್ರೆ ಶುರುವಾಯ್ತು. 70 ವರ್ಷಗಳಿಂದ ಶಾಂತವಾಗಿದ್ದ ಜನ ಜಾತ್ರೆ ನಡೆಸಿ, ಅಶಾಂತಿಯ ಮಡುವಿನಲ್ಲಿ ತೊಳಲಾಡುತ್ತಿದ್ದಾರೆ. ಜಾತ್ರೆಯ ದಿನ ಕುರಿಯ ರಕ್ತ-ಮಾಂಸ ಮಿಶ್ರಣದ ಅನ್ನದ ಬುಟ್ಟಿಗಳನ್ನು ತುಂಬಿಕೊಂಡು ದಲಿತ ವರ್ಗ ರಾತ್ರಿ ಸಮಯ ಹೊತ್ತುಕೊಂಡು ಊರಿನ ಸುತ್ತ "ಚರಗ" ಹಾಕಬೇಕು. ಇದರಿಂದ ಊರಲ್ಲಿ ಶಾಂತಿ ನೆಲೆಸಿ, ಹುಲುಸಾದ ಮಳೆ-ಬೆಳೆ ಬಂದು ಜನ ಸಮೃದ್ಧವಾಗಿರುವರೆಂಬ ಹಳೇಕುರುಡು ಸಂಪ್ರದಾಯ. ಈ ಅಂಧ ಸಂಪ್ರದಾಯವನ್ನು ದಲಿತರು ಕ್ರಮಬದ್ಧವಾಗಿ ನೆರವೇರಿಸಲಿಲ್ಲವೆಂಬ ನೆಪಕ್ಕಾಗಿ ಅವರ ಮೇಲೆ ಮಾರಣಹೋಮ ಜರುಗಿಸಲಾಯಿತು.

ಮಾರಮ್ಮ ಮೇಲ್ಜಾತಿ ಮತ್ತು ಕೆಳಜಾತಿ ಜನರ ಮಧ್ಯೆ ಅಶಾಂತಿಯ ಕೊಳ್ಳಿ ಇಟ್ಟು ಕಿಲಕಿಲ ನಗತೊಡಗಿದ್ದಾಳೆ. ಮೇಲ್ನೋಟಕ್ಕೆ ಜಗಳ ಈ ಕಾರಣದಿಂದ ಆರಂಭವಾಯಿತೆಂದು ಇಟ್ಟುಕೊಂಡರೂ ಮತ್ತೆ ಕೆಲವು ವಿಶೇಷವಾದ ಕಾರಣಗಳು ಕೆದಕಿ ನೋಡಿದಾಗ ಸಿಗುತ್ತವೆ. ಮಾರಮ್ಮನ ದೇವಸ್ಥಾನ ಊರಿನ ಸವರ್ಣೀಯರ ಮಧ್ಯಭಾಗದಲ್ಲಿರುವುದು. ದಲಿತರು ಅಲ್ಲಿ ಪ್ರವೇಶ ಮಾಡುವುದು ಹಳೆ ತಲೆಮಾರಿನ ಜನರಿಗೆ ನುಂಗಲಾರದ ತುತ್ತಾಗಿತ್ತು. ಮತ್ತು ಮಂಡಲ ಪಂಚಾಯಿತಿಯ ಉಪ ಪ್ರಧಾನ ರಾಮಚಂದ್ರಪ್ಪ ಅಸ್ಪೃಶ್ಯನೆಂಬ ಕಾರಣದಿಂದ ಕಡಬನ ಕಟ್ಟೆಯ ಬೇರೊಬ್ಬನಿಗೆ ಕೊಟ್ಟದ್ದು. ಇದರಿಂದ ಒಳಗೊಳಗೇ ಕುದಿಯುತ್ತಿದ್ದ ವೈಮನಸ್ಸು ಜನವರಿ 20ರಂದು ಸ್ಫೋಟಗೊಂಡಿತು.

ಜಿಲ್ಲಾ ಪರಿಷತ್ ಮತ್ತು ಮಂಡಲಪಂಚಾಯಿತಿಗಳು ಅಧಿಕಾರಕ್ಕೆ ಬಂದಂದಿನಿಂದಲೂ ದಲಿತರ ಮೇಲೆ ದಬ್ಬಾಳಿಕೆ, ದೌರ್ಜನ್ಯಗಳು, ಸಾಮಾಜಿಕ ಬಹಿಷ್ಕಾರಗಳು, ಮಾನ-ಪ್ರಾಣ ಹರಣಗಳು ಮಿತಿಮೀರುತ್ತಿವೆ ಎಂಬುದಕ್ಕೆ ಪ್ರತಿಯೊಂದು ಮಂಡಲ ಪಂಚಾಯಿತಿಗಳಲ್ಲೂ ನಡೆಯುತ್ತಿರುವ ದೊಂಬಿ, ಜಗಳ, ಕಗ್ಗೊಲೆಗಳು, ಅಶಾಂತಿಯ ಭಯಾನಕ ವಾತಾವರಣ ಮೂಕ ಸಾಕ್ಷಿಯಾಗಿದೆ. ಇಂದಿನ ವಿಕೇಂದ್ರೀಕರಣ ಬರೀ ಬಲಿಷ್ಠ ಜಾತಿಯವರ ಪಾಲಾಗಿದೆ. ಬಲಶಾಲಿಗಳಾದ ಮೇಲ್ಜಾತಿ ಜನರ ಮಾತನ್ನು ಕೇಳದಿದ್ದರೆ ಅವಿದ್ಯಾವಂತ, ಅಸಂಘಟಿತ, ಮುಗ್ಧರಾದ ದಲಿತರನ್ನು ಧ್ವಂಸ ಮಾಡುವುದು ವಿಕೇಂದ್ರೀಕರಣದ ಸ್ಪೆಷಲ್ ಗುಣವಾಗಿದೆ.

ಜಾತ್ರೆಗೆ ಬಂದಿದ್ದ ನೆಂಟರಿಷ್ಟರನ್ನು ಕಳಿಸಲೆಂದು ದಲಿತ ತಿಪ್ಪಯ್ಯ ಜನವರಿ 20 ರಂದು ಬಸ್ ನಿಲ್ದಾಣಕ್ಕೆ ಹೋಗಿದ್ದಾಗ ಕುಡುಕ ಗೋವಿಂದರೆಡ್ಡಿ 'ಚರಗ ಸರಿಯಾಗಿ ಹಾಕಲಿಲ್ಲ' ವೆಂದು ತಿಪ್ಪಯ್ಯನನ್ನು ಚೆನ್ನಾಗಿ ಥಳಿಸಿದರು. ದಲಿತ ಸಂಘರ್ಷ ಸಮಿತಿಯ ವೈಚಾರಿಕ ಹಿನ್ನೆಲೆಗಳನ್ನು ಮೈಗೂಡಿಸಿಕೊಂಡಿರುವ ತರುಣರು ಗೋವಿಂದರೆಡ್ಡಿಯ ನಡತೆಯನ್ನು ಪ್ರತಿಭಟಿಸಿ ಹತ್ತಾರು ಜನ ಸೇರಿ ಠಾಣೆಗೆ ದೂರು ಕೊಡಲು ಮುಂದಾದಾಗ ಕೋಪೋದ್ರಿಕ್ತರಾದ ಮೇಲ್ಜಾತಿ ಜನ ಅವರ ಮೇಲೆ ಕಲ್ಲಿನ ಮಳೆಗರೆದರು. ಕಲ್ಲಿನ ಹೊಡೆತಕ್ಕೆ ಆರ್ಭಟಿಸಿದ ದಲಿತರ ಕೂಗು ಠಾಣೆಯಲ್ಲಿದ್ದ ಸಬ್ ಇನ್ಸ್‌ಪೆಕ್ಟರ್ ಕಾಖಂಡಕಿ ಕಿವಿಗೆ ಅಪ್ಪಳಿಸಿತು. ತಕ್ಷಣ

---

**ಮಾರಕಾಸ್ತ್ರಗಳನ್ನು ಹಿಡಿದ ಆ ಗುಂಪು ದಲಿತಕೇರಿಯನ್ನು ಸುತ್ತುಗಟ್ಟಿತು. ಗುಡಿಸಲುಗಳಿಗೆ ಬೆಂಕಿ ಇಟ್ಟು ರಾಕ್ಷಸ ಕುಣಿತ ಕುಣಿಯಿತು.**

**ಪೊಲೀಸು ಪೇದೆ ಗುಂಡು ಹಾರಿಸದೆ ಹೋಗಿದ್ದರೆ ಮಕ್ಕಳು, ಮುದುಕರು ಮಹಿಳೆಯರು ಬೆಂದು ಬೂದಿಯಾಗುತ್ತಿದ್ದರು.**

**ಆ ಬರ್ಬರ ರಕ್ಕಸ ಕುಣಿತದ ವಿವರಗಳು.**

---

ಅವರು ಅಲ್ಪ ಪೊಲೀಸ್ ಸಿಬ್ಬಂದಿಯೊಂದಿಗೆ ಸ್ಥಳಕ್ಕೆ ಧಾವಿಸಿದರು. ವ್ಯವಸ್ಥಿತವಾಗಿ ಪೊಲೀಸರನ್ನು ಗುಂಪಿನೊಳಗೆ ಸೇರಿಸಿಕೊಂಡ ಗೂಂಡಾಗಳ ಗುಂಪು ಸಬ್‌ಇನ್ಸ್‌ಪೆಕ್ಟರ್, ಧಫೇದಾರ್ ಮತ್ತು ಕಾನ್ಸ್‌ಟೇಬಲ್‌ಗಳ ಮೇಲೆ ಕಲ್ಲು ತೂರಿದರು. ಕಾಖಂಡಕಿ ಅವರು ತಮ್ಮ ಜೀವ ಉಳಿಸಿಕೊಳ್ಳಲು ಮತ್ತು ಗಲಭೆಯನ್ನು ಶಮನ ಮಾಡಲೆಂದು ಆಕಾಶಕ್ಕೆ ಗುಂಡನ್ನು ಹಾರಿಸಿದಾಗ ಗುಂಪು ಚೆಲ್ಲಾಪಿಲ್ಲಿಯಾಯತು. ಆದರೆ ಮತ್ತೊಂದು ಕೋಮಿನ ಗುಂಪು ಒಂದಾಗಿ ದಲಿತ ಕಾಲೊನಿಗೆ ಬೆಂಕಿ ಕಲ್ಲುಗಳೊಂದಿಗೆ ಧಾಳಿ ನಡೆಸಿ ಕೊಚ್ಚ್ ನೋರ ಹನುಮಂತಪ್ಪ, ಮಲ್ಲಯ್ಯ ಬಿನ್ ಮಾರಪ್ಪ, ಲಿಂಗಣ್ಣನಹಳ್ಳಿ ನಿಂಗಪ್ಪ ತಿಮ್ಮಯ್ಯ, ಹೊನ್ನೂರ ಹನುಮಂತಪ್ಪ, ಕೆ. ಕೃಷ್ಣಪ್ಪ, ರಾಮಚಂದ್ರಪ್ಪ, [illegible]ರಪ್ಪ, ಭರ್ಮಪ್ಪ, ಕೆಂಗಪ್ಪ, ಕುಲುಮೆ ತಿಪ್ಪಯ್ಯ, ದೊಡ್ಡಿ ಗುಡ್ಡಪ್ಪ- ಚೌಡಪ್ಪ, ಓಬಳೇಶಪ್ಪ, ಹನುಮಂತಪ್ಪ, ಹುಲ್ಲಪ್ಪ, ಇವರುಗಳ ಹುಲ್ಲಿನ ಗುಡಿಸಲು ಮನೆಗಳನ್ನು ಮತ್ತು ಚಪ್ಪರಗಳನ್ನು ಸಂಪೂರ್ಣವಾಗಿ ಸುಟ್ಟಿತು.

ಹಂಚಿರ್ ತಿಪ್ಪೆಸ್ವಾಮಿ, ಶಿವರುದ್ರಪ್ಪ, ಮಹಂತಪ್ಪ ಗುರುಮೂರ್ತಿ, ಹುಲ್ಲಪ್ಪ ಕಾಟೇಹಳ್ಳಿ ತಿಮ್ಮಯ್ಯ ಯಲ್ಲಪ್ಪ, ತಿಪ್ಪೆಸ್ವಾಮಿ, ಹೊನ್ನೂರ, ದೊಡ್ಡ ತಿಪ್ಪೇಶಿ ಓಬಳೇಶಿ, ಡಿ. ಎಂ. ಸೋಮಶೇಖರ್ ಹೆಂಚಿನ ಮನೆಗಳನ್ನು ಪುಡಿ ಪುಡಿ ಮಾಡಲಾಗಿದೆ.

ಹನುಮಂತಪ್ಪ, ಶಿವರುದ್ರಪ್ಪ ಓಬಣ್ಣ, ತಿಪ್ಪರುದ್ರಪ್ಪ, ಸಣ್ಣತಿಮ್ಮಯ್ಯ, ನರಸಯ್ಯರ ಹುರುಳಿ ನವಣೆ, ಜೋಳ, ಸಜ್ಜೆ, ಶೇಂಗಾ ಹೊಟ್ಟಿನ ಬವಣೆಗಳನ್ನು ಸುಡಲಾಗಿದೆ.

**ಏಳು ಜನ ದಲಿತರು, ಇಬ್ಬರು ಇನ್ಸ್‌ಪೆಕ್ಟರು ಒಬ್ಬ ದಫೇದಾರ್ ನಾಲ್ಕು ಜನ ಕಾನ್ಸ್‌ಟೇಬಲ್‌ಗಳು ಕಲ್ಲಿನ ಹೊಡೆತಕ್ಕೆ ತುತ್ತಾಗಿದ್ದಾರೆ. ಒಟ್ಟು ಸುಮಾರು 60-70 ಸಾವಿರ ರೂ. ಮೌಲ್ಯದ ಆಸ್ತಿ-ಪಾಸ್ತಿ ನಷ್ಟವಾಗಿದೆ. ಇದುವರೆಗೂ ಪೊಲೀಸರು ಒಟ್ಟು 94 ಜನರನ್ನು ಅರೆಸ್ಟ್ ಮಾಡಿ ಕೋರ್ಟಿಗೆ ಕಳಿಸಿದ್ದಾರೆ. ಅವರೆಲ್ಲರೂ ಜಾಮೀನಿನ ಮೇಲೆ ಬಿಡುಗಡೆ ಆಗಿದ್ದಾರೆ.**

ಗಲಭೆ ಪೀಡಿತ ಪ್ರದೇಶಕ್ಕೆ ಡಿ.ಐ.ಜಿ. ಶ್ರೀನಿವಾಸ ಆಳ್ವ, ರಕ್ಷಣಾ ಸಚಿವರಾದ ಜಾಲಪ್ಪ, ಕೆ ಎಚ್ ರಂಗನಾಥ, ಅಶ್ವಥ್‌ರೆಡ್ಡಿ, ಎಸ್.ಪಿ. ಇನ್‌ಫಂಟೋ, ಡಿ.ಸಿ ವೆಂಕಟೇಶ್ವರರಾವ್, ಜಿಲ್ಲಾ ಸಹಕಾರ ಸಚಿವ ಏಕಾಂತಯ್ಯ ಭೇಟಿ ನೀಡಿ ಗಂಬೀರ ಪರಿಸ್ಥಿತಿಯನ್ನು ವೀಕ್ಷಿಸಿದ್ದಾರೆ. ಅರೆಸ್ಟ್ ಆದ ಜನ ಬಿಡುಗಡೆ ಆಗಿ ಬಂದ ಮೇಲೆ ನಮ್ಮ ಪ್ರಾಣ ತೆಗೆಯುತ್ತಾರೆಂದು ಬಹಳಷ್ಟು ಜನ ತಮ್ಮ ಮನೆ ಮಠ, ಆಸ್ತಿ-ಪಾಸ್ತಿಗಳನ್ನು ತೊರೆದು ಹೋಗುತ್ತಿದ್ದಾರೆ.

ಪ್ರಧಾನ ಆರೋಪಿ ಮಂಡಲ ಪ್ರಧಾನ ರಾಮಕೃಷ್ಣರೆಡ್ಡಿ ತಲೆ ಮರೆಸಿಕೊಂಡಿದ್ದಾನೆ. ಈತನೇ ಈ ಗಲಭೆಗೆ ಕುಮ್ಮಕ್ಕು ನೀಡಿದ್ದಾನೆಂಬ ಗುಸು ಗುಸು ಹಬ್ಬಿದೆ. ಈ ಹಿಂದೆ ಗೋಕಾಕ್ ಚಳುವಳಿ ಕಾಲದಲ್ಲಿ ಈ ಹಳ್ಳಿಯ ಬಡ ಮುಸ್ಲಿಮರನ್ನು ಸರ್ವನಾಶ ಮಾಡಿ ಊರಿಂದ ದೂರಕ್ಕೆ ತಳ್ಳಿದ್ದ ಶ್ರೇಯಸ್ಸು ರಾಮಕೃಷ್ಣರೆಡ್ಡಿಗೆ ಸಲ್ಲಬೇಕು. ಮುಸ್ಲಿಮರನ್ನು ಊರಿಂದ ಒದ್ದೋಡಿಸಿದಂತೆ ದಲಿತರನ್ನು ಸಹ ಒದ್ದೋಡಿಸಬೇಕೆಂಬ ಉತ್ಕಟ ಆಕಾಂಕ್ಷೆ ಹೊಂದಿದ್ದಾರಂತೆ. ವಿಗ್ರಹ ಭಂಜಕರನ್ನು ಬಂಧಿಸುವಂತೆ ಒತ್ತಾಯ ಪಡಿಸುವ ಭಾರತಮಾತೆಯ ಜ್ಯೇಷ್ಠ ಸುಪುತ್ರರಾದ ಹಿಂದೂ ಪರಿಷತ್ ಮತ್ತು ಬಿ.ಜೆ.ಪಿ. ಗಳು ಭಾರತಮಾತೆಯ ಮನವನ್ನು ಬಜಾರಿಗೆ ಹರಾಜ್ ಹಾಕುತ್ತಿರುವ ಮೇಲ್ಜಾತಿ ಜನರ ವಿರುದ್ಧ ಸೊಲ್ಲೆತ್ತದಿರುವುದು ಅವರ ಬ್ರಾಹ್ಮಣ ಹಿಂದೂ ಪ್ರೇಮವನ್ನು ಸಾಬೀತು ಪಡಿಸುತ್ತಿದೆ. ರಾಮಕೃಷ್ಣ ರೆಡ್ಡಿ ಪೊಲೀಸ್ ಠಾಣೆಗೆ ನುಗ್ಗಿ ಈ ಹಿಂದಿನ ಸಬ್ ಇನ್ಸ್‌ಪೆಕ್ಟರ್ ಬಸವರಾಜು ಅವರ ಮೇಲೆ ಹಲ್ಲೆ ಮಾಡಿದ್ದರಿಂದ, ಹೊಡಿ ಬಡಿ, ಕಡಿ ಈತನವೇ ಘೋಷಣೆಗಳಾಗಿದ್ದರಿಂದ ಕಂಡ-ಕಂಡವರ ಮೇಲೆಲ್ಲಾ ಗೂಂಡಾಗಿರಿ ಮಾಡುತ್ತಿದ್ದರಿಂದ, ಸ್ಟೇಷನ್‌ಗೆ ಮುತ್ತಿಗೆ ಹಾಕುತ್ತಿದ್ದರಿಂದ ಪೊಲೀಸರು ಇವರಿಗಾಗಿ ಒಂದು ಸ್ಪೆಷಲ್ "ರೌಡಿ ಲಿಸ್ಟ್" ತಯಾರು ಮಾಡಿದ್ದಾರಂತೆ. ಮಾಜಿ ಎಂ. ಪಿ. ಮತ್ತು ಸಮಾಜವಾದಿ ಆದ ಮುಲ್ಕಿ ಗೋವಿಂದರೆಡ್ಡಿಯ ಅಳಿಯನಾದ ಈತ ಕಾಂಗೆ ಹಿರಿಯ ರಾಜಕಾರಣಿಗಳ ಬೆಂಬಲದಿಂದ ನಿರೀಕ್ಷಣಾ ಜಾಮೀನು ಪಡೆದು ರಾಜಾರೋಷವಾಗಿ ಅಡ್ಡಾಡುತ್ತಿದ್ದಾರೆ.

ಗಲಭೆ ಪೀಡಿತ ಸ್ಥಳದಲ್ಲಿ ಹಾಜರಿದ್ದ ದಲಿತ ಸಂಘರ್ಷ ಸಮಿತಿಯ ಟಿ. ರಾಮು ಅನಿಸಿಕೆ ಪ್ರಕಾರ ಊರಿನ ಎಲ್ಲಾ ರೆಡ್ಡಿ, ಲಿಂಗಾಯತ, ಗೊಲ್ಲ, ನಾಯಕ ಅಗಸ, ಕೋಮಿನ ಜನರೆಲ್ಲ ಒಂದಾಗಿ ದಲಿತ ಕಾಲೋನಿ ಮೇಲೆ ದಾಳಿ ಮಾಡುತ್ತಿದ್ದರು, ಅಲ್ಲದೆ ಮೇಲ್ಜಾತಿ ಜನರನ್ನು ಹುರಿದುಂಬಿಸಲು ಮಾರಮ್ಮನ ಗುಡಿಗೆ ಮಾದಿಗರೆಲ್ಲ ನುಗ್ಗುತ್ತಿದ್ದಾರೆ ಅವರನ್ನು ಒದ್ದೋಡಿಸಲು ಎಲ್ಲರೂ ಒಂದಾಗಿ ದೊಣ್ಣೆ ಕಲ್ಲುಗಳೊಂದಿಗೆ ವೇಗವಾಗಿ ಬನ್ನಿ ಎಂದು ಡಂಗುರ ಸಾರಿ ತಮಟೆ ಭಾರಿಸುತ್ತಿದ್ದರಂತೆ. ಈ ಸಮರೋಪಾದಿಯ ದಾಳಿಯಿಂದು ಬಸವಳಿದ ದಲಿತರು ತಮ್ಮ ಮಕ್ಕಳು ಮರಿಗಳನ್ನು ಹೆಗಲ ಮೇಲೆ ಹೊತ್ತುಕೊಂಡು ಮನೆ, ಮಠ, ಆಸ್ತಿ ಪಾಸ್ತಿಗಳನ್ನು ತ್ಯಜಿಸಿ ಊರಿಂದ ಬಹುದೂರ ಓಡಿಹೋಗಿದ್ದರಂತೆ. ಪುಟ್ಟ ಗುಬ್ಬಿ ಮರಿಯ ಗೂಡಿಗೆ ಹದ್ದು ದಾಳಿ ಮಾಡಿದಂತಹ ಅನುಭವವಾಯಿತಂತೆ. ಗೂಂಡಾ ಗುಂಪನ್ನು ಪೊಲೀಸರು ಸಾಹಸ ಪಟ್ಟು ಬಂಧಿಸಿದಾಗ ಅವರ ಹಿಂಬಾಲಕರು ಪೊಲೀಸ್ ವ್ಯಾನಿಗೆ ಕಲ್ಲುಗಳನ್ನು ತೂರಲಾರಂಭಿಸಿದರು. ಪೊಲೀಸರೇ ಪ್ರಾಣ ಭಯದಿಂದ ನರಳಬೇಕಾದಂತಹ ಪರಿಸ್ಥಿತಿ ಇರುವಾಗ ದಲಿತರ ಪಾಡೇನು ? ಎಂದು ನೀವೇ ಊಹಿಸಿಕೊಳ್ಳಿ.

ಈ ಗಲಭೆಗೆ ಸಂಬಂಧಿಸಿದಂತೆ ಪೊಲೀಸರ. ನಿಜಕ್ಕೂ ದಲಿತರಿಗೆ ಸೂಕ್ತವಾದ ಬಂದೋಬಸ್ತನ್ನು ನೀಡಿ ಅವರ ಪ್ರಾಣವನ್ನು ರಕ್ಷಿಸಿದ್ದಾರೆ. ಬಲವಾದ ಪೊಲೀಸ್ ಕಾವಲನ್ನು ಇಡಲಾಗಿದೆ. ಪ್ರತಿ ಹಳ್ಳೀಲಿ ಇಂಥ ಪೊಲೀಸ್ ರಕ್ಷಣೆ ದೊರೆತರೆ ಈ ದೇಶದಲ್ಲಿ ಎಲ್ಲಾ ದಲಿತರ ಮೇಲೆ ದಲ್ಬಾಳಿಕೆ ನಡೆಯಲಾರದೇನೋ? ಸಾಮಾಜಿಕ ಕಳಕಳಿ ಇರುವ ಎಸ್. ಪಿ. ಇನ್‌ಫಂಟೋ ಮತ್ತು ಜಿಲ್ಲಾಧಿಕಾರಿ ವೆಂಕಟೇಶ್ವರರಾವ್ ಅವರು ದಲಿತರಿಗೆ ಬಿಗಿ ರಕ್ಷಣೆ ಕೊಟ್ಟಿದ್ದಾರೆ. ಇವರು ಸೂಕ್ತ ರಕ್ಷಣೆಯನ್ನು ಕೊಡದಿದ್ದರೆ ಮೇಲ್ಜಾತಿಯವರು ದಲಿತರ ರುಂಡಗಳನ್ನು ಚೆಂಡಾಡುತ್ತಿದ್ದರೇನೊ? ಇಂಥ ಅಧಿಕಾರಿಗಳಿರುವುದರಿಂದ ಜಿಲ್ಲೆಗಳಲ್ಲಿ ಜರುಗುವ ದಲಿತರ ದಮನ ತಡೆಗಟ್ಟಬಹುದಾಗಿದೆ. ದಮನಕ್ಕೊಳಗಾದ ಜನರಿಗೆ ಸೂಕ್ತ ರಕ್ಷಣೆ ಕೊಡುತ್ತಿರುವುದನ್ನು ಸಹಿಸದ ಜಿಲ್ಲಾ ಸಹಕಾರ ಮಂತ್ರಿಗಳಾದ ಏಕಾಂತಯ್ಯ ಈ ಅಧಿಕಾರಿಗಳ ಎತ್ತಂಗಡಿಗೆ ಸಕಲ ಪ್ರಯತ್ನ ಮಾಡುತ್ತಿರುವುದು ಪಶು ಸಮಾನವಾದುದು.

ಎಸ್. ಪಿ. ಮುಸ್ಲಿಮರಾಗಿರುವುದರಿಂದ ಈ ಹಿಂದಿನ 'ಗೋಕಾಕ್' ಚಳುವಳಿಯಲ್ಲಿದ್ದ ಹಳೆ ಕೇಸುಗಳನ್ನು ಕೆದಕಿ ನಮ್ಮ ಮೇಲಾಕಿ ನಮಗೆ ತೊಂದ್ರೆಕೊಡುತ್ತಿದಾರೆಂದು ತಿಪ್ಪೇಸ್ವಾಮಿ ಹೇಳುತ್ತಾರೆ.

ಶಿವಣ್ಣರೆಡ್ಡಿ, ಹನುಮಂತರೆಡ್ಡಿ, ತಿಪ್ಪೇಸ್ವಾಮಿ, ಮಾಜಿ ಸಮಾಜವಾದಿಗಳಾದ ಮುಕುಂದರನ್ನು ಖುದ್ದು ಭೇಟಿಮಾಡಿ ಘಟನೆ ಬಗ್ಗೆ ಪ್ರಸ್ತಾಪಿಸಿದಾಗ ಅವರೆಲ್ಲರೂ ಮನೆಗೆ ಬೆಂಕಿ ಇಟ್ಟವರ ಪರವಾಗಿ ಮಾತಾಡುತ್ತಿದ್ದರು. ಆ ಹಳ್ಳಿಯಲ್ಲಿ ದ.ಸಂ.ಸ. ವಿಚಾರಗಳನ್ನು ತಿಳಿದುಕೊಂಡಿರುವುದರಿಂದ ನಮಗೆ ಕಾನೂನುಗಳನ್ನು ಕೇಳುತ್ತಾರೆ. ನಮ್ಮ ಎದುರಿಗೆ ನಿಂತು ಮಾತಾಡುತಾರೆ, ಗುಲಾಮ ಗಿರಿಯನ್ನು ಪ್ರತಿಭಟಿಸುತ್ತಿದ್ದಾರೆಂಬ ದುರಾಭಿಮಾನ ಅವರ ಮಾತಿನಲ್ಲಿತ್ತು.

ಉತ್ತರ ಪ್ರದೇಶ, ಬಿಹಾರ, ಬೆಲ್ಚಿ, ಮಧ್ಯಪ್ರದೇಶದಲ್ಲಿ ನಡೆಯುತ್ತಿದ್ದಂತಹ ದಲಿತರ ನರಮೇಧ, ಮಾನ-ಪ್ರಾಣ, ಹರಣ ಆಸ್ತಿ–ಪಾಸ್ತಿ ವಿನಾಶ ಹೆಗಡೆ ರಾಜ್ಯದಲ್ಲೂ ಹೇರಳವಾಗಿರುವುದು ಅವರು ಮೌಲ್ಯಾಧಾರಿತ ಸರ್ಕಾರದ ವಿಶಿಷ್ಟ ಲಕ್ಷಣವಾಗಿದೆ.

(ಕೃಪೆ: ಮಲೆನಾಡು ಸಂಗತಿ)

# ನ್ಯಾಯಕ್ಕೆ ಆಗ್ರಹ ವೇದಿಕೆಗೆ ಮುತ್ತಿಗೆ

**ಶಿವಮೊಗ್ಗ:**

ಫೆ. 6 ರಂದು ಇಲ್ಲಿ ಸಚಿವರಿಬ್ಬರು ಭಾಗವಹಿಸಿದ್ದ ಸಮಾರಂಭದ ವೇದಿಕೆ ಏರಿದ ದ.ಸಂ.ಸ. ಕಾರ್ಯಕರ್ತರು ನಿರಂತರವಾಗಿ ನಡೆಯುತ್ತಿರುವ ದಲಿತರ ಮೇಲಿನ ದೌರ್ಜನ್ಯ ತಡೆಯಲು ವಿಫಲವಾಗಿರುವ ಸರ್ಕಾರದ ವಿರುದ್ಧ ಘೋಷಣೆ ಕೂಗಿದರು.

ಸಚಿವ ಚಂದ್ರಶೇಖರ್ ಮಾತಿಗಾರಂಭಿಸುತ್ತಿದ್ದಂತೆಯೇ ವೇದಿಕೆಯನ್ನು ಮುತ್ತಿದ ಅವರು ತತ್ಕ್ಷಣ ತಪ್ಪಿತಸ್ಥರ ವಿರುದ್ಧ ಕೂಡಲೇ ಕ್ರಮ ಕೈಗೊಳ್ಳುವಂತೆ ಪಟ್ಟು ಹಿಡಿದರು.

ಸಚಿವ ನಜೀರ್‌ಸಾಬ್ ಅವರ ಮಾತಿಗೂ ಕಿವಿಗೊಡಲಿಲ್ಲ. ಪೊಲೀಸರು ವೇದಿಕೆಯಿಂದ ಕೆಳಗಿಳಿಸಿದರೂ ಸಮಾರಂಭದ ಕೊನೆಯವರೆಗೂ ನ್ಯಾಯಕ್ಕಾಗಿ ಆಗ್ರಹಪಡಿಸಿ ಅವರು ಘೋಷಣೆ ಕೂಗುತ್ತಲೇ ಇದ್ದರು.



(ಸಚಿವ ನಜೀರ್ ಸಾಬ್‌ರಿಗೆ ವೇದಿಕೆಯ ಮೇಲೆ ಮುತ್ತಿಗೆ ಹಾಕಿರುವ ದ. ಸಂ. ಸ. ಕಾರ್ಯಕರ್ತರು)

# ಮಾನಸಿಕ ಕತ್ತಲು ದೂರ ಮಾಡಲು.......

**ಗೌರಿಬಿದನೂರು.ಫೆ.28**

ಇತ್ತೀಚೆಗೆ ದಲಿತರ ಮೇಲಾಗುತ್ತಿರುವ ವಿಕೃತ ಹಾಗೂ ಕ್ರೂರ ಹಲ್ಲೆಗಳು ಮನುಷ್ಯ ಜಾತಿಯ ಮೇಲೆ ನಡೆದ ಅವಮಾನಗಳೆಂದು, ಒಟ್ಟು ಸಮಾಜದ ಅಂತರಂಗ ಕೊಳೆಯುತ್ತಿರುವುದರ ಗಂಭೀರ ಸೂಚನೆ" ಎಂದು ಭಾವಿಸಿದ ಆರೋಗ್ಯವಂತ ಮನಸ್ಸಿನ ಎಲ್ಲಾ ಜಾತಿಯವರೂ ಕೂಡಿ ಇಲ್ಲಿ ಒಂದು ದಿನದ ಧರಣಿ ನಡೆಸಿದರು.

ಇಂದು ಬೆಳಿಗ್ಗೆ 9 ಕ್ಕೆ ಪುರಭವನದ ಎದುರು ಪ್ರಾರಂಭವಾದ ಈ ಧರಣಿ ಸತ್ಯಾಗ್ರಹ ಸಂಜೆ 5ರವರೆಗೆ ನಡೆಯಿತು. ಧರಣಿಯ ಕೊನೆಯಲ್ಲಿ "ಇನ್ನೊಮ್ಮೆ ಇಂತಹ ಘಟನೆಗಳನ್ನು ನಡೆಯಲು ಬಿಡುವುದಿಲ್ಲ ನಾವೆಲ್ಲ ಹುಟ್ಟಿನಿಂದ ಮಾನವರು" ಕೊನೆಯವರೆಗೂ ಮಾನವರಾಗಿಯೇ ಉಳಿಯುತ್ತೇವೆ" ಎಂದು ಸಾರಲಾಯಿತು.

'ನಮ್ಮ ವಿರೋಧ ಕೇವಲ ಈ ಅಪರಾಧಗಳನ್ನು ಮಾಡಿದ ವ್ಯಕ್ತಿಗಳ ವಿರುದ್ಧವೋ ಅಥವಾ ಈ ಸಂದರ್ಭಗಳಲ್ಲಿ ಕಾರ್ಯಪ್ರವೃತ್ತವಾಗದಿರುವ ಸರ್ಕಾರದ ವಿರುದ್ಧವೂ ಆಗಿಲ್ಲ. ಇದು ಒಟ್ಟು ಸಮಾಜದ ನಡವಳಿಕೆಯ ವಿರುದ್ಧ, ಮಾನವೀಯತೆಯಿಲ್ಲದಿರುವಿಕೆಯ ವಿರುದ್ಧ, ಮೇಲ್ಜಾತಿಯ ಪ್ರಗತಿಗಾಮಿಗಳೆನಿಸಿಕೊಳ್ಳುವರಲ್ಲಿಯೂ ಆಳದಲ್ಲಿ ಅಡಗಿರುವ ಜಾತೀಯತೆಯ ಮಾನಸಿಕ ಕತ್ತಲಿನ ವಿರುದ್ಧ ಎಂಬುದನ್ನು ಧರಣಿಯಲ್ಲಿ ಪಾಲುಗೊಂಡಿದ್ದವರು ಸ್ಪಷ್ಟಪಡಿಸಿದರು.

ಮಲಿನಗೊಂಡು ವಿಷವಾಗುತ್ತಿರುವ ಸಮಾಜದ ರಕ್ಷಣೆಗೆ ತುಂಬಾ ಅಗತ್ಯವಾಗಿದ್ದ ಇಂಥ ಅರಿವು ಮತ್ತು ಎಚ್ಚರವನ್ನು ಹುಟ್ಟಿಸುವ ಈ ಧರಣಿಯನ್ನು ವ್ಯವಸ್ಥೆ ಮಾಡಿದವರು ವಿಚಾರ ವೇದಿಕೆ ಮತ್ತು ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಸದಸ್ಯರು.

**ದಲಿತರ ಮೇಲೆ ನಡೆಯುತ್ತಿರುವ ಹಲ್ಲೆ ಕೊಲೆಗಳನ್ನು ಪ್ರತಿಭಟಿಸಿ ದ. ಸಂ. ಸ. ನಾಡಿನಾದ್ಯಂತ ತನ್ನ ಪ್ರತಿಭಟನೆಯನ್ನು ಅನೇಕ ವಿಧಗಳಲ್ಲಿ ವ್ಯಕ್ತಪಡಿಸಿದೆ.**

**"ಪಂಚಮ"ಕ್ಕೆ ಬಂದ ಕೆಲವು ಸಂಕ್ಷಿಪ್ತ ವರದಿಗಳು ಇಲ್ಲಿವೆ.**

# ಒತ್ತುವರಿ ಸಕ್ರಮ: ಪಿಕೆಟಿಂಗ್ ಬಂಧನ

ಜನತಾ ಸರ್ಕಾರದ ಆಡಳಿತಾವಧಿಯಲ್ಲಿ ಭೂ ಸುಧಾರಣೆ ಕಾಯ್ದೆ ಜಾರಿಯಾಗದೆ, ದಲಿತರ ಪಾಲಿಗೆ ಗಗನ ಕುಸುಮವಾಯಿತು. ಬದಲಿಗೆ ಶ್ರೀಮಂತ ಭೂಮಾಲೀಕರಿಗೆ ಅನುಕೂಲಕರವಾಗಿ ಪರಿಣಮಿಸಿತು. ತಡೆಯಾಜ್ಞೆ, ಒತ್ತುವರಿಗಳಮೂಲಕಅವರು ಸಾವಿರಾರುಎಕರೆಭೂಮಿ ಲಪಟಾಯಿಸಿದರು. ಹೆಗಡೆಯವರೇ ಇವೆಲ್ಲವನ್ನೂ ಪರೋಕ್ಷವಾಗಿ ಬೆಂಬಲಿಸುತ್ತಾ ಬಂದಿದ್ದಾರೆ. ಹಳ್ಳಿಗಾಡುಗಳು ಇಂದು ರಣರಂಗಗಳಾಗಿ ಪರಿಣಮಿಸುತ್ತಿವೆ. ಹೆಗಡೆಯವರ ಈ ಕುತಂತ್ರ ನೀತಿಯನ್ನು ಖಂಡಿಸಿ ಫೆ. 5 ರಂದು ಕ.ದ.ಸಂ.ಸ. ಕೋಲಾರ ಜಿಲ್ಲಾ ಶಾಖೆಯು ಪಿಕೆಟಿಂಗ್ ಕಾರ್ಯಕ್ರಮ ನಡೆಸಿತು.

ಜಿಲ್ಲೆಯ ಎಲ್ಲಾ ಕಂದಾಯ ಇಲಾಖೆ ಕಛೇರಿಗಳ ಮುಂದೆ ಪಿಕೆಟಿಂಗ್ ಮಾಡಿ, ಸರ್ಕಾರವು ಭೂ ಒತ್ತುವರಿ ಶಾಸನ ಜಾರಿಮಾಡುವ ಪ್ರಯತ್ನಕ್ಕೆ ತಡೆಯೊಡ್ಡಿ ಕುತಂತ್ರ ನೀತಿಯು ಹಿಮ್ಮೆಟ್ಟುವಂತೆ ಮಾಡಿತು.

"ಒತ್ತುವರಿ ಶಾಸನ-ರದ್ದಾಗಲಿ, ಒತ್ತುವರಿ ಭೂಮಿ ದಲಿತರದಾಗಲಿ, ಹೆಂಡ ಬೇಡ- ಭೂಮಿ ಬೇಕು ಎಂದು ಘೋಷಣೆಗಳನ್ನು ಕೂಗುತ್ತಾ ಪಿಕೆಟಿಂಗ್ ಪ್ರಾರಂಭಿಸಿದರು, ಹಲವು ಕಡೆ ಪೊಲೀಸರು ಮಧ್ಯ ಪ್ರವೇಶಿಸಿ ಕಾರ್ಯಕರ್ತರನ್ನು ಬಂಧಿಸಿ ಬಿಡುಗಡೆ ಮಾಡಿದರು, ಹಲವೆಡೆ ಅಂದು ಸಂಜೆಯವರೆಗೂ ಪಿಕೆಟಿಂಗ್ ಯಶಸ್ವಿಯಾಗಿ ನಡೆಯಿತು.

"ಪೊಲೀಸ್ ಠಾಣೆಗಳಿಂದ ಬಿಡುಗಡೆಯಾದ ನಂತರ ಬಹಿರಂಗ ಸಭೆಗಳನ್ನು ನಡೆಸಿ.ತತ್ತೂರು ಪ್ರಕರಣವನ್ನು ಖಂಡಿಸಿದರು ಕೋಲಾರ ಜಿಲ್ಲಾ ಕೇಂದ್ರದಲ್ಲಿ ತತ್ತೂರು ಪ್ರಕರಣವನ್ನು ಖಂಡಿಸಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ.ಜಿಲ್ಲಾಧಿಕಾರಿಗಳ ಮುಖಾಂತರ ಮುಖ್ಯಮಂತ್ರಿಗಳ ರಾಜೀನಾಮೆಗೆ ಒತ್ತಾಯಿಸಿ. ಮನವಿ ಕೊಡಲಾಯಿತು.

# ಸಚಿವರಿಗೆ ಘೇರಾವ್, ಮೆರವಣಿಗೆ, ಧಿಕ್ಕಾರ!

**ಚಿಂತಾಮಣಿ:** ಬೆಂಡಿಗೇರಿ ಮತ್ತು ತತ್ತೂರಿನಲ್ಲಿ ದಲಿತರಿಗೆ ಆದ ಅವಮಾನ ತಪ್ಪಿಸಲು ವಿಫಲವಾದ ಸರ್ಕಾರವನ್ನು ಖಂಡಿಸಲು ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಇಲ್ಲಿಗೆ ಬಂದಿದ್ದ ಸಚಿವರಿಬ್ಬರನ್ನು ಘೇರಾವ್ ಮಾಡಿದರು.

ಕೃಷಿ ಇಲಾಖೆ ಕಟ್ಟಡ ಉದ್ಘಾಟನಾ ಸಮಾರಂಭ ಮುಗಿಸಿ ತೆರಳುತ್ತಿದ್ದ ಸಚಿವರುಗಳಾದ ಆರ್. ವಿ. ದೇಶಪಾಂಡೆ, ಜಿಲ್ಲಾ ಪರಿಷತ್ ಅಧ್ಯಕ್ಷ ಬಿ. ಎಂ. ಕೃಷ್ಣಾರೆಡ್ಡಿ ಮತ್ತು ಸಿ. ಬೈರೇಗೌಡ ಹಾಗೂ ಜಿಲ್ಲಾಧಿಕಾರಿ ತಂಗರಾಜ್ ಅವರನ್ನು ಸುತ್ತುವರೆದ ಸುಮಾರು ಮುನ್ನೂರು ಜನ ಕಾರ್ಯಕರ್ತರು ಸರ್ಕಾರದ ವಿರುದ್ಧ ಘೋಷಣೆ ಕೂಗಿದರು.

**ಮಂಡ್ಯ:** ಮಂಡ್ಯ ಜಿಲ್ಲಾ ದಲಿತ ಸಂಘರ್ಷ ಸಮಿತಿ ಸದಸ್ಯರು ಫೆ. 15 ರಂದು ಜಿಲ್ಲಾಧಿಕಾರಿ ಕಛೇರಿ ಎದುರು ಧರಣಿ ಸತ್ಯಾಗ್ರಹ ನಡೆಸಿದರು.

ಬೆಂಡಿಗೇರಿಯಲ್ಲಿ ದಲಿತರಿಗೆ ಮಲತಿನ್ನಿಸಿದವರನ್ನು ಶಿಕ್ಷಿಸಲು ಉದಾಸೀನ ಮಾಡಿದುದರಿಂದಲೇ ತತ್ತೂರಿನಲ್ಲಿ ಅಂತಹುದೇ ಘಟನೆ ನಡೆಯಲು ಕಾರಣವಾಗಿದೆ. ಇದಕ್ಕೆಲ್ಲಾ ಸರ್ಕಾರವೇ ಸಂಪೂರ್ಣ ಹೊಣೆಯಾಗಿದೆ ಎಂದು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿಯಲ್ಲಿ ಆಪಾದಿಸಲಾಗಿದೆ.

ಧರಣಿ ಸತ್ಯಾಗ್ರಹದ ನಂತರ ಬಹಿರಂಗ ಸಭೆಯೂ ನಡೆಯಿತು.

**ಧಾರವಾಡ:**

ಬೆಂಡಿಗೇರಿ, ತತ್ತೂರುಗಳಲ್ಲಿ ದಲಿತರಮೇಲೆ ನಡೆಸಿದ ದೌರ್ಜನ್ಯ ಅನಾಗರಿಕ, ಅಮಾನುಷ ಮತ್ತು ಕರ್ನಾಟಕಕ್ಕೆ ಕಳಂಕಪ್ರಾಯ ಎಂದು ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾ ಸಮಿತಿ ತಿಳಿಸಿದೆ.

ಚೆನ್ನವೀರ ಕಣವಿ ಅಧ್ಯಕ್ಷತೆಯಲ್ಲಿ ಫೆ. 15 ರಂದು ಇಲ್ಲಿ ಸಭೆ ಸೇರಿದ್ದ ಸಮಿತಿಯು ತತ್ತೂರು ಘಟನೆಗೆ ಸಂಬಂಧಿಸಿದವರ ಮೇಲೆ ನಿರ್ದಾಕ್ಷಿಣ್ಯ ಕ್ರಮ ಕೈಗೊಳ್ಳಬೇಕೆಂದು ಸರ್ಕಾರವನ್ನು ಆಗ್ರಹಪಡಿಸಿತು.

**ಚಾಮರಾಜನಗರ:** ಮನುಷ್ಯತ್ವದಲ್ಲಿ ನಂಬಿಕೆ ಇರುವವರಿಗೆಲ್ಲಾ ನಾಚಿಕೆ ಹುಟ್ಟಿಸುವ ಬೆಂಡಿಗೇರಿ. ತತ್ತೂರಿನ ಘಟನೆಗಳನ್ನು ಪ್ರತಿಭಟಿಸಿ ಇಲ್ಲಿನ ಸರ್ವೋದಯ ಡಾ॥ ಬಿ. ಆರ್. ಅಂಬೇಡ್ಕರ್ ಯುವಕ ಸಂಘದವರು ಮೆರವಣಿಗೆ ನಡೆಸಿದರು.

ಆದಷ್ಟು ಜಾಗ್ರತನಾಗಿ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳದಿದ್ದರೆ ಆಮರಣಾಂತ ಉಪವಾಸ ಸತ್ಯಾಗ್ರಹವನ್ನೂ ಆರಂಭಿಸುವುದಾಗಿಯೂ ಅವರು ಸರ್ಕಾರಕ್ಕೆ ಎಚ್ಚರಿಕೆ ನೀಡಿದರು.

**ಬಂಗಾರಪೇಟೆ:**

ಡಾ॥ ಅಂಬೆಡ್ಕರ್ ಪ್ರತಿಮೆಯ ಬಳಿಯಿಂದ ಪ್ರಾರಂಭವಾದ ಪ್ರತಿಭಟನಾ ಮೆರವಣಿಗೆ ಪಟ್ಟಣದ ಪ್ರಮುಖ ಬೀದಿಗಳಲ್ಲಿ ನಡೆಯುತ್ತಾ ತಾಲ್ಲೂಕಾಫೀಸಿಗೆ ಬಂತು. ಮೆರವಣಿಗೆಯಲ್ಲಿ ವಿದ್ಯಾರ್ಥಿ ಯುವಜನರು. ದಲಿತ ನೌಕರರ ಒಕ್ಕೂಟ ಬಾಗವಹಿಸಿದ್ದವು. ಕಿವಿ,ಕಣ್ಣು ಕಾಣಿಸದೆ ಕುರುಡಾಗಿ ಹೋಗಿರುವ ರಾಜ್ಯದ ಮುಖ್ಯಮಂತ್ರಿ, ಗೃಹಮಂತ್ರಿ ಮತ್ತು ದಲಿತ ಶಾಸಕ ಮಂತ್ರಿಗಳ ಪ್ರತಿಕೃತಿಗಳನ್ನು ಮೆರವಣಿಗೆಯಲ್ಲಿ ಒಯ್ಯಲಾಯಿತು.

ತಾಲೂಕು ಕಚೇರಿಯ ಎದುರು ಬಹಿರಂಗ ಸಭೆ ನಡೆಯಿತು. ಕೊನೆಯಲ್ಲಿ ಈ ಪ್ರತಿಕೃತಿಗಳಿಗೆ ಬೆಂಕಿ ಹಚ್ಚಲಾಯಿತು. ಸಭೆಯನ್ನು ಉದ್ದೇಶಿಸಿ ಎಂ. ತಿಮ್ಮಯ್ಯ ಮಾತನಾಡಿದರು.

**ಕೊಳ್ಳೆಗಾಲ:** ಸವರ್ಣೀಯರ ಹೇಯ ಕೃತ್ಯ ವಿರೋಧಿಸಿ ಇಲ್ಲಿನ ಅಸ್ಪೃಶ್ಯತಾ ನಿವಾರಣಾ ಸಮಿತಿ ನೇತೃತ್ವದಲ್ಲಿ ಫೆ. 10 ರಂದು ಪ್ರತಿಭಟನಾ ಮೆರವಣಿಗೆ ನಡೆಸಲಾಯಿತು.

ಸುಮಾರು ಮೂರು ಸಾವಿರ ಜನರು ಮೆರವಣಿಗೆಯಲ್ಲಿದ್ದರು. ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳದ ಸರ್ಕಾರದ ವಿರುದ್ಧ ಅವರು ಘೋಷಣೆ ಕೂಗುತ್ತಿದ್ದರು. ಗೃಹ ಸಚಿವ ಜಾಲಪ್ಪ ಮತ್ತು ಮುಖ್ಯಮಂತ್ರಿ ಹೆಗಡೆ ಅವರ ಪ್ರತಿಕೃತಿಗಳನ್ನು ಸುಡಲಾಯಿತು.

ನಂತರ ನಡೆದ ಬಹಿರಂಗ ಸಭೆಯಲ್ಲಿ ಮಾತನಾಡಿದ ಭಾಷಣಕಾರರು ಶೀಘ್ರದಲ್ಲಿ ಅಪರಾಧಿಗಳನ್ನು ಶಿಕ್ಷಿಸದಿದ್ದರೆ ಉಗ್ರ ಚಳುವಳಿ ನಡೆಸುವುದಾಗಿ ಸರ್ಕಾರಕ್ಕೆ ಎಚ್ಚರಿಸಿದರು.

## ಸ್ವಾಭಿಮಾನಿ ದಲಿತನ ಕಗ್ಗೊಲೆ...

(9ನೇ ಪುಟದಿಂದ)

ಪುನಃ 1986ರಲ್ಲಿ ಅಂಬೇಡ್ಕರ ಜಯಂತಿಯನ್ನು ಮಾಡುವಾಗ ಹತ್ತಿ ಬಸವರಾಜಪ್ಪ ಎಂಬುವರು ತಮ್ಮ ಜೀತಗಾರನಿಂದ ತನ್ನ ಎರಡು ಸೀಮೆ ಎತ್ತುಗಳನ್ನು ಮೆರವಣಿಗೆಯಲ್ಲಿ ಬಿಡಬೇಕೆಂದು ಸನ್ನದ್ಧನಾಗಿ ನಿಂತು ಕೊಂಡಾಗ ಅಲ್ಲಿಯೇ ಹಾಜರಿದ್ದ ಯರಗೇರ ಅರಕ್ಷಕ ಉಪ ನಿರೀಕ್ಷಕರು ಎತ್ತುಗಳನ್ನು ತಡೆದು ನಿಲ್ಲಿಸಿದರು.

1-5-1987ರಂದು ಮದುವೆ ಮೆರವಣಿಗೆಯನ್ನು ತೆಗೆದುಕೊಂಡು ಗುಡಿಗೆ ಕಾಯಿ ಕೊಡಲು ಹೋಗಿ ಹೊರಗೆ ನಿಂತು ಕಾಯಿ ಒಡೆದು ಪೂಜೆ ಮಾಡಿ ಕೊಡಿರೆಂದು ಸವರ್ಣಿಯರಿಗೆ ಕೇಳಿದಾಗ್ಯೂ ಬೇಡರ ಯರಮೂತಲ ಹುಲಿಗೆಪ್ಪ ಹಾಗೂ ಇತರ ನಾಲ್ಕು ಜನರು ಸೇರಿ ದಲಿತರ ಮೇಲೆ ಹಲ್ಲೆ ನಡೆಸಿದರು. ಕಲ್ಲು ತೂರಿ ದಲಿತ ಭೀಮಪ್ಪನನ್ನು ಗಾಯಗೊಳಿಸಿದರು. ದಲಿತರು ದೇವರ ಪೂಜೆ ಇಲ್ಲದೆ ಬಿಟ್ಟು ತಿಂದು ವಾಪಸಾದರು. ನಂತರ ಗುನ್ನೆ ನಂ. 54:87 ದಾಖಲಾಯಿತು.

ನಂತರ ಎರಡನೇ ಸಲ ಇನ್ನೊಂದು ಮದುವೆಯಾಯಿತು. ದಲಿತರು ಹಿಂದಿನ ಘಟನೆಯನ್ನು ಸ್ಮರಿಸಿಕೊಂಡು ಅಂದು ಪೋಲೀಸರ ರಕ್ಷಣೆಯೊಂದಿಗೆ ಮದುವೆ ಮೆರವಣಿಗೆ ತೆಗೆದುಕೊಂಡು ಬಂದರು. ಮೆರವಣಿಗೆ ಊರ ಅಗಸೆ ಬಾಗಿಲಿಗೆ ಬರುತ್ತಿದ್ದಂತೆಯೇ ಲಿಂಗಾಯಿತ ಶಿವಕುಮಾರ ಎಂಬ ಮಂಡಲ ಪಂಚಾಯತ ಸದಸ್ಯನು ದಲಿತರನ್ನು ಊರಿನೊಳಕ್ಕೆ ಬಿಡುವುದಿಲ್ಲವೆಂದು ಮೆರವಣಿಗೆಯನ್ನು ಅಡ್ಡಗಟ್ಟಿದನು. ಕುಡಿದು ಬಂದು ಪೋಲೀಸರೊಂದಿಗೆ ಕುಸ್ತಿಯನ್ನೇ ಪ್ರಾರಂಭಿಸಿದನು. ನಂತರ ಶ್ರೀ ಮಲ್ಲಿಕಾರ್ಜುನ(ಆರಕ್ಷಕಉಪನಿರೀಕ್ಷಕರು)ಅವನನ್ನು ಎಳೆದುಕೊಂಡು ಹೋಗಿ ಅವನ ಮನೆಯಲ್ಲಿ ಕೂಡಿಸಿ ದಲಿತರ ಮೆರವಣಿಗೆಯನ್ನು ಊರೊಳಗೆ ಪ್ರವೇಶಿಸುವಂತೆ ಮಾಡಿ ಗುಡಿ ಪ್ರವೇಶ ಮಾಡಿಸಿದರು.

ಇವೆಲ್ಲಾ ಮಾರ್ಪಾಡುಗಳು ಜಿಡ್ಡುಗಟ್ಟಿ ಹೋದ ಹಿಂದೂ ಧರ್ಮ ಸವರ್ಣಿಯರ ಮನಸ್ಸನ್ನು ಮಾರ್ಪಡಿಸಲಾಗಲಿಲ್ಲ. ಅವರಲ್ಲಿ ಒಳಗೊಳಗೆ ದ್ವೇಷ, ವೈಷಮ್ಯಗಳು, ಹೊಗೆಯಾಡ ಹತ್ತಿದವು. ದಲಿತರಲ್ಲಿ ನಾಲ್ಕು ಯುವಕರನ್ನು ತಮ್ಮ ಹಿಟ್ ಲಿಸ್ಟಿಗೆ ಸೇರಿಸಿಕೊಂಡರು. ಅದರಲ್ಲಿ ಸತ್ತ ಬಜಾರಪ್ಪನು ಕೂಡಾ ಒಬ್ಬ. ಈ ಕುರಿತು ದಲಿತರು ಜಿಲ್ಲಾ ಪೋಲೀಸ್ ಅಧಿಕಾರಿಗಳಿಗೆ ದಿ। 2-1-87 ರಂದು ಮನವಿ ಸಲ್ಲಿಸಿ ರಕ್ಷಣೆಯನ್ನು ಒದಗಿಸಲು ಕೋರಿದ್ದರು.

### ಭೂ ಮಾಲೀಕರ ದೌರ್ಜನ್ಯ

ಆ ಗ್ರಾಮದಲ್ಲಿ ದಲಿತರ ಮೇಲೆ ಅತ್ಯಾಚಾರ, ಕೊಲೆ, ದೌರ್ಜನ್ಯ ನಡೆಸುತ್ತಿರುವ ಸವರ್ಣೀಯರ ಸೂರ್ಯನಾರಾಯಣ, ಪಾರ್ವತ ಗೌಡ, ಗದ್ವಾಲ್ ಬಸವರಾಜಪ್ಪ, ಹತ್ತಿ ನಾಗರಾಜ ಹತ್ತಿ ಶಿವಕುಮಾರ, ನೀಲಕಂಠಪ್ಪ, ಗುಂಜಳ್ಳಿ ಬಸವರಾಜ. ಯಂಕಪ್ಪ, ಹೊಸಪೇಟೆ ಶರಣಪ್ಪ, ಅಮರೇಗೌಡ ಮುಂತಾದವರು ಈ ಊರಿನ ಪ್ರಮುಖರು. ಇವರು ದುಡಿಯುವಂತಹ ಜನರ ಮೇಲೆ ದೌರ್ಜನ್ಯ ಮಾಡುತ್ತಾ ಪುಡಿ ಪಾಳೆಗಾರರಾಗಿ ಮೆರೆಯುತ್ತಿದ್ದಾರೆ. ಇದೀಗ 19-2-88 ರಂದು ಆರೋಪಿಗಳು ಜಾಮೀನು ಮೇಲೆ ಬಿಡುಗಡೆಯಾಗಿ ಬಂದಿದ್ದಾರೆ. ದಲಿತರ ಮೇಲೆ ಇನ್ನೊಮ್ಮೆ ಎಂದು ಬೀಳುತ್ತಾರೋ ಗೊತ್ತಿಲ್ಲ. ದಲಿತರ ಜೀವಭಯ ಪೋಲೀಸು ರಕ್ಷಣೆ ಇದ್ದರೂ ದೂರವಾಗಿಲ್ಲ.

# ಶಿಕ್ಷೆಯಲ್ಲ ಹಕ್ಕುಗಳಿಗಾಗಿ ಹೋರಾಟ-DSF

ಸಂವಿದಾನದತ್ತ ಸೌಲಭ್ಯಗಳಿದ್ದೂ ದಲಿತ ವಿದ್ಯಾರ್ಥಿಗಳು ಅನೇಕ ಎಡರು ತೊಡರುಗಳ ನಡುವೆ ವಿದ್ಯಾಭ್ಯಾಸ ಮುಂದುವರೆಸಬೇಕಿದೆ. ಇದಕ್ಕೆ ಕಾರಣ ಅಧಿಕಾರಶಾಹಿಯು, ಆಳುವ ವರ್ಗದ ಅಂತರಂಗಕ್ಕೆ ಹಿಡಿದ ಜಾತಿ ರೋಗ. ಈ ರೋಗ ದಲಿತ ವಿದ್ಯಾರ್ಥಿಗಳ ಸೌಲಭ್ಯ ಮೊಟಕುಗೊಳಿಸುವ, ಹತ್ತು ವರ್ಷಗಳ ಹಿಂದೆ ನಿಗಧಿಪಡಿಸಿದ ವಿದ್ಯಾರ್ಥಿ ವೇತನವನ್ನೇ ಇಂದೂ ನೀಡುವ, ನಾಲ್ಕು ದಶಕಗಳಾದರೂ ಜಿಲ್ಲಾ ಮಟ್ಟದಲ್ಲಿ ಒಂದೇ ಒಂದು ಒಳ್ಳೇ ಹಾಸ್ಟೆಲ್ ಕಟ್ಟಡ ಕಟ್ಟಿಸದ ರೂಪದಲ್ಲಿ ಕಾಣಿಸಿಕೊಂಡಿದೆ.

ಈ ರೋಗಕ್ಕೆ ಮೊದಲನೆಯ ಶಿಕ್ಷೆಯಾಗಿ ಫೆ. 11 ರಂದು ಪ್ರತಿ ಜಿಲ್ಲಾ ಕೇಂದ್ರದಲ್ಲೂ ದಲಿತ ವಿದ್ಯಾರ್ಥಿ ಒಕ್ಕೂಟ ಮೆರವಣಿಗೆ ನಡೆಸಿ ಸರ್ಕಾರಕ್ಕೆ ಮನವಿ ಸಲ್ಲಿಸಿತು. ಈ ಅಕ್ಷರಗಳ ನಡುವೆಯೂ ನುಸುಳಿ ಕಾಡಿಸಿದ ಇತ್ತೀಚಿನ ಮಲರಾಕ್ಷಸನ ಮುಸುಡಿಗೂ ಉಗಿಯಲಾಯಿತು.

**ಶಿವಮೊಗ್ಗ ಫೆ 11** ಜಿಲ್ಲಾದ್ಯಂತ ಬಂದಿದ್ದ ನೂರಾರು ವಿದ್ಯಾರ್ಥಿಗಳು ಎನ್. ಟಿ. ರಸ್ತೆಯ ಕಾಲೇಜು ಹಾಸ್ಟೆಲ್‌ನಿಂದ ಪ್ರತಿಭಟನಾ ಮೆರವಣಿಗೆಯನ್ನು ಪ್ರಾರಂಭಿಸಿದರು. ಮೆರವಣಿಗೆಯು ಎ. ಎ. ಸರ್ಕಲ್ ಮುಖಾಂತರ ಗೋಪಿಸರ್ಕಲ್. ಅಂಬೇಡ್ಕರ್ ಸರ್ಕಲ್ ಹಾಯ್ದು ಜಿಲ್ಲಾ ಪರಿಷತ್ ಕಛೇರಿ ಎದುರು ಜಮಾಯಿಸಿತು. ರಸ್ತೆಯುದ್ದಕ್ಕೂ ಶಾಂತ ರೀತಿಯಿಂದ ಶಿಸ್ತಿನಿಂದ ನಡೆಯುತ್ತಿದ್ದ ವಿದ್ಯಾರ್ಥಿ ಮಿತ್ರರು "ವಿದ್ಯಾರ್ಥಿ ವೇತನ ಹೆಚ್ಚಿಸಬೇಕು". "ನಮಗೆ ಬೇಕು ವಸತಿ, ಶಾಲೆ", "ರೋಸ್ಟರ್ ಪದ್ದತಿ ಕಡ್ಡಾಯವಾಗಿ ಜಾರಿಗೆ ಬರಲಿ". "ನಿವೃತ್ತಿ ವಯಸ್ಸು 55ಕ್ಕೆ ಇಳಿಸಿ" ಮುಂತಾದ ತಮ್ಮ ಬೇಡಿಕೆಯ ಘೋಷಣೆಗಳನ್ನು ಕೂಗುತ್ತಿದ್ದರು.

ಜಿಲ್ಲಾ ಪರಿಷತ್ ಉಪಾಧ್ಯಕ್ಷರಿಗೆ ಮನವಿ ಸಲ್ಲಿಸಿದ ದ. ವಿ. ಒ. ವಿದ್ಯಾರ್ಥಿಗಳನ್ನು ಉದ್ದೇಶಿಸಿ ದ.ಸಂ.ಸ. ಕಾರ್ಯಕರ್ತರಾದ ವೆಂಕಟೇಶ್ ಮೊದ್ಲಿಯಾರ್ (ಡಿ.ವಿ. ಎಸ್. ಕಾಲೇಜು ಉಪನ್ಯಾಸಕರು) ರಾಜ್ಯ ದ. ಸಂ. ಸ. ಸಂಚಾಲಕರಾದ ಚಂದ್ರಪ್ರಸಾದ್ ತ್ಯಾಗಿ, ದಲಿತ ವಿದ್ಯಾರ್ಥಿ ಒಕ್ಕೂಟದ ಮಾಜಿ ಜಿಲ್ಲಾ ಸಂಚಾಲಕರಾದ ಲೋಕೇಶ್ ಮತ್ತು ಜಿಲ್ಲಾ ದ. ವಿ. ಒ. ಸಂಚಾಲಕ ಬೆಳಗುತ್ತಿ ನಾಗರಾಜ್ ಮಾತನಾಡಿದರು. ಕ್ರಾಂತಿ ಗೀತೆಯೊಂದಿಗೆ ಸಭೆ ಮುಕ್ತಾಯವಾಯಿತು.

**ಮೈಸೂರು :** ದಲಿತ ವಿದ್ಯಾರ್ಥಿ ಒಕ್ಕೂಟ. ಅಶೋಕಪುರಂನ ಡಾ. ಅಂಬೇಡ್ಕರ್ ಸಂಘ ಹಾಗೂ ದಲಿತ ಜಾಗೃತ ಸಮಿತಿ ನೇತೃತ್ವದಲ್ಲಿ ದಲಿತ ವಿದ್ಯಾರ್ಥಿಗಳು ಇಲ್ಲಿನ ಬೆಂಗಳೂರು ರಸ್ತೆ ಟೋಲ್‌ಗೇಟ್ ಬಳಿ ಒಂದು ಗಂಟೆ ಕಾಲ ರಸ್ತೆ ತಡೆ ಚಳುವಳಿ ನಡೆಸಿದರು.

**ಮೆರವಣಿಗೆ :** ದಲಿತ ವಿದ್ಯಾರ್ಥಿಗಳು ಬೆಳಿಗ್ಗೆ ರಾಮಸ್ವಾಮಿ ವೃತ್ತದಿಂದ ಜಿಲ್ಲಾಧಿಕಾರಿ ಕಚೇರಿವರೆಗೆ ಮೆರವಣಗೆ ನಡೆಸಿದರು.

### ಬೇಡಿಕೆಗಳು

1. ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಉತ್ತಮ ಸೌಲಭ್ಯಗಳುಳ್ಳ ವಿದ್ಯಾರ್ಥಿ ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳನ್ನು ತೆರೆಯಬೇಕು.
2. ಬೆಲೆ ಏರಿಕೆಗೆ ತಕ್ಕಂತೆ ವಿದ್ಯಾರ್ಥಿ ವೇತನ ಹೆಚ್ಚಿಸಬೇಕು.
3. ಸ್ನಾತಕೋತ್ತರ ಪದವಿಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳನ್ನು ನೇರ ನೇಮಕ ಮಾಡಿಕೊಳ್ಳುವುದರ ವಿರುದ್ಧ ತಂದಿರುವ ತಡೆಯಾಜ್ಞೆ ರದ್ದು ಪಡಿಸಬೇಕು.
4. ಹಾಸ್ಟೆಲುಗಳಲ್ಲಿ ಕೆಲಸಕ್ಕಿರುವ ದಿನಗೂಲಿ ನೌಕರರನ್ನು ಖಾಯಂಗೊಳಿಸಬೇಕು.
5. ಸರ್ಕಾರಿ ಇಲಾಖೆಗಳಲ್ಲಿ ರೋಸ್ಟರ್ ಪದ್ಧತಿಯನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು.

**ಹಾಸನ. ಫೆ. 12**

ದಲಿತ ವಿದ್ಯಾರ್ಥಿ ಒಕ್ಕೂಟ ಹಾಸನ ಶಾಖೆಯು 11.2.88 ರಂದು ಜಿಲ್ಲಾಕೇಂದ್ರದಲ್ಲಿ ಸರ್ಕಾರದ ವಿದ್ಯಾರ್ಥಿಗಳ ಬೇಡಿಕೆಗಳನ್ನಿಟ್ಟು ಸಾಂಕೇತಿಕ ಪ್ರತಿಭಟನೆ ಮೆರವಣಿಗೆ ನಡೆಸಿತು.

ಬೆಳಿಗ್ಗೆ 12ಗಂಟೆಗೆ ಮೆರವಣಿಗೆಯು ಜೂಬಿಲಿ ಮೈದಾನದಿಂದ ಪ್ರಾರಂಭವಾಯಿತು. ಈಮೆರವಣಿಗೆಯಲ್ಲಿ ಐನೂರಕ್ಕೂ ಹೆಚ್ಚು ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು. ನಂತರ ಪ್ರಮುಖ ಬೀದಿಗಳಲ್ಲಿ ಜಿಲ್ಲೆಗೊಂದು ಹಾಸ್ಟೆಲ್ ಕಟ್ಟಡ ಕೊಡಿ. ಬೆಲೆ ಏರಿಕೆಗೆ ತಕ್ಕಂತೆ ವಿದ್ಯಾರ್ಥಿ ವೇತನ ಹೆಚ್ಚಿಸಿ, ರೋಸ್ಟರ್ ಪದ್ದತಿ ಜಾರಿಗೊಳಿಸಿ, ಇದೆಂಥರಾಜ್ಯ, ಇದೆಂಥರಾಜ್ಯ, ಹೆಗಡೆ ರಾಜ್ಯ ಹೇಲಿನ ರಾಜ್ಯ-ಮುಂತಾದ ಘೋಷಣೆಗಳನ್ನು ಕೂಗುತ್ತಾ ಬಂದು ಪ್ರವಾಸಿ ಮಂದಿರದಲ್ಲಿದ್ದ ಗೃಹಮಂತ್ರಿ ಜಾಲಪ್ಪನವರನ್ನು ಭೇಟಿ ಮಾಡಿ ಸಮಾಲೋಚನೆ ನಡೆಸಿತು. ಮನವಿ ಪತ್ರ ಕೊಟ್ಟ ದ. ವಿ. ಸಂಚಾಲಕ ತವನಂದಿ ದೊರೆರಾಜು ವಿದ್ಯಾರ್ಥಿಗಳ ಸಮಸ್ಯೆಗಳ ಬಗ್ಗೆ ಚರ್ಚಿಸಿ ಕೂಡಲೇ ಸರ್ಕಾರ ವಿದ್ಯಾರ್ಥಿಗಳ ಸಮಸ್ಯೆ ಬಗ್ಗೆ ಗಮನ ಹರಿಸುವಂತೆ ಒತ್ತಾಯಿಸಿದರು.

ನಂತರ ದ.ಸಂ.ಸ. ಸಂಚಾಲಕ ಜಯರಾಮ್, ಸಂದೇಶ್‌ರವರು ತತ್ತೂರು, ಬೆಂಡಿಗೇರಿ ಘಟನೆಗಳ ಬಗ್ಗೆ ಕೇಳಿದಾಗ ಸಚಿವ ಜಾಲಪ್ಪ ಇದೊಂದು ಹೇಯಕೃತ್ಯವೆಂದು ಹೇಳಿ ಸರ್ಕಾರ ಕ್ರಮ ತೆಗೆದುಕೊಳ್ಳುವುದೆಂದರು. ಮುಂದುವರೆದು ರೋಸ್ಟರ್ ಪದ್ದತಿ ಬಗ್ಗೆ ಖಾಸಗಿ ಸಂಸ್ಥೆಗಳೊಡಗೂಡಿ ಒಂದು ಕಟ್ಟು ನಿಟ್ಟಾದ ಮಸೂದೆ ಜಾರಿಗೆ ತರಲಾಗಿದೆ ಎಂದರು. ತತ್ತೂರಿನ ಘಟನೆ ಬಗ್ಗೆ ತನಿಖೆ ನೆಡೆಸಲು ಸರ್ಕಾರ ಕ್ರಮತೆಗೆದುಕೊಂಡಿದೆ ಎಂಬುದಾಗಿಯೂ ಸ್ಪಷ್ಟಪಡಿಸಿದರು.

ಈ ಏಳು ವರ್ಷಗಳ ನಿರಂತರ ಹೋರಾಟದ ನಡುವೆಯೂ ಭೂಹೀನ ದಲಿತರು ಇದೇ ಭೂಮಿಯನ್ನು ನಂಬಿಕೊಂಡು ಅಲ್ಲಿ ನಗುವ ಸೂರ್ಯಕಾಂತಿ ಬೆಳೆದಿದ್ದಾರೆ. ನಗುವ ಈ ಪ್ರತಿ ಹೂವಿನ ಹಿಂದೆಯೂ ದಲಿತರ ಶ್ರಮದ ಹೋರಾಟದ ಬೆವರು–ಕಣ್ಣೀರಿನ– ಸ್ವಾಭಿಮಾನದ ಕತೆ ಇದೆ.



# ಸೂರ್ಯಕಾಂತಿಯ ಹಿಂದೆ ಸ್ವಾಭಿಮಾನದ ಕತೆ

ರಾಯಚೂರು ಜಿಲ್ಲೆಯ ಒಂಬತ್ತು ತಾಲ್ಲೂಕುಗಳಲ್ಲಿ ಅತಿ ಹಿಂದುಳಿದ ತಾಲ್ಲೂಕು ದೇವದುರ್ಗ. ಕೈಗಾರಿಕಾ ಉದ್ದಿಮೆ ಅಥವಾ ಯಾವುದೇ ನೀರಾವರಿ ಸೌಲಭ್ಯ ಇಲ್ಲದಿರುವುದರಿಂದ ಬಡವರಿಗೆ ಅರೆಬರೆ ಉದ್ಯೋಗಾವಕಾಶಗಳೂ ಇಲ್ಲವಾಗಿ ಸೀದ ಭೂಮಿ ಮತ್ತು ಬೆಂಕಿ ಕಾರುವ ಆಕಾಶದ ನಡುವೆ ದಿಕ್ಕೆಟ್ಟು ಬಾಳ್ವೆ ಮಾಡುತ್ತಿದ್ದಾರೆ.

ದೇವದುರ್ಗಕ್ಕೆ 24 ಕಿ.ಮಿ. ಸಮೀಪ ಇರುವ ಮಲ್ಲೆದೇವರ ಗುಡ್ಡದಲ್ಲೂ ಇದೇ ಗತಿ. ದಲಿತರೊಳಗಿನ ಮುಟ್ಟಬಾರದವರೂ, ಮುಟ್ಟಿಸಿಕೊಳ್ಳಬಹುದಾದ ಬೇಡರು, ಇಳಿಗೇರಾ, ಕುರುಬರು, ನಾಯಕರು ಇರುವಂತಹ ಈ ಊರಿನಲ್ಲಿ ಜೀವನಕ್ಕೆ ಬೇರೆ ಮಾರ್ಗಗಳೇ ಇಲ್ಲ. ಈ ಗ್ರಾಮದ ಅಕ್ಕ ಪಕ್ಕ ಇರುವ ಜಮೀನೆಲ್ಲವೂ 'ಮೇಲುಜಾತಿಯ' ನಾಡಗೌಡರದು. ದಲಿತರು ನಾಡಗೌಡರ ನೆಲದಲ್ಲಿ ಕೂಲಿಮಾಡಿದರೆ ಒಲೆಯಲ್ಲಿ ಜೀವ ಆಡಬಹುದು ಇಲ್ಲವಾದರೆ ಇಲ್ಲ. ಒಟ್ಟನಲ್ಲಿ ಇವರೆಲ್ಲರ ಬದುಕು 'ಕೂಲಿ ಚೇಸ್ತೆ ಕುಂಡಗಾಲಿ ಲ್ಯಾಕ ಪೋತೆ ಎಂಡಗಾಲಿ' ಅನ್ನುವಂತಾಗಿದೆ.

ಈ 30 ವರ್ಷಗಳಿಂದ ಹಾಳುಬಿದ್ದ ಸರ್ಕಾರಿ ಗೈರಾಣ ಸರ್ವೆ ನಂ. 11 ಬಂಜರು ಜಮೀನು 38ಎಕರೆ 27 ಗುಂಟೆ ಇತ್ತು. ಆದರೆ ಅದು ಬಡವರ ಕಣ್ಣಿಗೆ ಬಿದ್ದದ್ದು 1977ರಲ್ಲಿ! ಭೂಹೀನ ದಲಿತರು, ಬಡವರೂ ದ. ಸಂ. ಸ. ವನ್ನು ಮುಂದಿಟ್ಟುಕೊಂಡು ಸರ್ಕಾರಕ್ಕೆ ಭೂಮಿ ಕೊಡುವಂತೆ ಒತ್ತಾಯಿಸಿದರು.

ಆರು ತಿಂಗಳು ಕಾದರೂ ಸರ್ಕಾರದಿಂದ ಯಾವ ಉತ್ತರವೂ ಬರಲಿಲ್ಲ. ಸುತ್ತಮುತ್ತಲ ಹಳ್ಳಿಗಾಡಿನ ಭೂಹೀನರೆಲ್ಲಾ ಒಂದಾಗಿ 4, ಜನವರಿ 1978ರಂದು ಸಾಗುಮಾಡಲು ಮುಂದಾದರು. ಏಳು ವರ್ಷ ಕಳೆದರೂ ಸರ್ಕಾರ ಕಣ್ಣು ಬಿಡಲಿಲ್ಲ. ಆ ಮೇಲೆ 1985ರ ಒಂದು ದಿನ ಏಕಾಏಕಿ ತಹಶೀಲ್ದಾರರು 'ಇದು ಅರಣ್ಯ ಇಲಾಖೆಗೆ ಸೇರಿದ ಭೂಮಿ' ಎಂದು ಘೋಷಿಸಿದರು. ಸದರಿ ಭೂಮಿಯನ್ನು ಭೂಹೀನರಿಗೆ ಕೊಡುವಂತೆ ಒತ್ತಾಯಿಸಿದಾಗ 'ನನಗೆ ಮಂಜೂರು ಮಾಡುವ ಅಧಿಕಾರ ಇಲ್ಲ' ಎಂದು ಬರೆದುಕೊಟ್ಟರು.

ದಲಿತರೆಲ್ಲಾ ಒಂದಾಗಿ ಹೋರಾಟಕ್ಕೆ ಧುಮುಕಿದರು. 1985ರ ಫೆಬ್ರವರಿ ತಿಂಗಳಲ್ಲಿ ಸುಮಾರು ಎರಡು ಸಾವಿರ ದಲಿತರು ಪ್ರತಿಭಟನಾ ಮೆರವಣಿಗೆ ನಡೆಸಿ ಸರ್ಕಾರವನ್ನು ಒತ್ತಾಯಿಸಿದರು. 22–11–1985 ರಂದು ಮತ್ತೊಮ್ಮೆ 800 ಜನ ದಲಿತರು ಸೇರಿ ತಾಲ್ಲೂಕು ಕಛೇರಿ ಎದುರು ಸಾಂಕೇತಿಕ ಧರಣಿ ನಡೆಸಿದರು. 27–3–87 ರಂದು 2000 ದಲಿತರು ಒಂದು ದಿವಸ ಉಪವಾಸ ಸತ್ಯಾಗ್ರಹ ನಡೆಸಿದರು. ಆಮೇಲೆ ಅರೆಹೊಟ್ಟೆಯ ಗಂಜಿಗಿಲ್ಲದ ಬರಗಾಲದ ಸ್ಥಿತಿಯಲ್ಲೂ ಮಲ್ಲೇದೇವರ ಗುಡ್ಡದಿಂದ ದೇವದುರ್ಗಕ್ಕೆ ಕಾಲ್ನಡಿಗೆ ಜಾಥಾ ನಡೆಸಿದರು. 30–7–87ರಂದು ತಾಲ್ಲೂಕು ಕಛೇರಿ ಮುಂದೆ ನೆರೆದು ಸರ್ಕಾರಕ್ಕೆ ಮನವಿ ಸಲ್ಲಿಸಿದರು.

ಇಷ್ಟೆಲ್ಲಾ ನಡೆದರೂ ಸರ್ಕಾರ ಯಾವ ಉತ್ತರವನ್ನೂ ಕೊಡದೆ ಮೌನ ತಾಳಿತು. ಹಿಂದೆ 'ಜಿಲ್ಲಾ ದಲಿತ ಸಂಘರ್ಷ ಸಮಿತಿ' ನೇತೃತ್ವದಲ್ಲಿ ಜಿಲ್ಲಾಧಿಕಾರಿಗಳಿಗೆ ಮನವಿ ಕೊಟ್ಟು ಒತ್ತಾಯಿಸಿದ್ದರ ಆಧಾರದ ಮೇಲೆ ಅವರು ತಾತ್ಕಾಲಿಕವಾಗಿ ಕೆಲವು ದಿನ ಸಾಗು ಮಾಡಲು ಅವಕಾಶ ಕೊಟ್ಟರು. ಸರ್ಕಾರಿ ಆದೇಶ ನಂ. ಕೆಎಲ್ಆರ್ : 1977–78 ಪ್ರಕಾರ ಸಾಗು ಮಾಡುತ್ತಿರುವ ಭೂಹೀನ ದಲಿತರಿಗೆ ಭೂಮಿ ಕೊಡುವಂತೆ ಆದೇಶಿಸಲಾಗಿದೆ. ದ.ಸಂ.ಸ. ಕಂದಾಯ ಕಾರ್ಯದರ್ಶಿ ಮತ್ತು ಮಂತ್ರಿ, ಶಾಸಕರಿಗೆ ಭೂಹೀನರಿಗೆ ಭೂಮಿ ಕೊಡಲು ಒತ್ತಾಯಿಸಿದ್ದರೂ ಒಂದು ಸಾಲು ಉತ್ತರವೂ ಬಂದಿಲ್ಲ.

ಈ ಏಳು ವರ್ಷಗಳ ನಿರಂತರ ಹೋರಾಟದ ನಡುವೆಯೂ ಭೂಹೀನ. ದಲಿತರು ಇದೇ ಭೂಮಿಯನ್ನು ನಂಬಿಕೊಂಡು ಅಲ್ಲಿ ನಗುವ ಸೂರ್ಯಕಾಂತಿ ಬೆಳೆದಿದ್ದಾರೆ. ನಗುವ ಈ ಪ್ರತಿ ಹೂವಿನ ಹಿಂದೆಯೂ ದಲಿತರ ಶ್ರಮದ, ಹೋರಾಟದ ಬೆವರು – ಕಣ್ಣೀರಿನ – ಸ್ವಾಭಿಮಾನದ ಕತೆ ಇದೆ. ಸರ್ಕಾರದ ಧೂಳು ಹಿಡಿದ ಕಡತಗಳು ಮಾತ್ರ ಅವರಿಗೆ ಒಡೆತನ ಕೊಟ್ಟಿಲ್ಲ. ಶ್ರೀಮಂತ ಕಾಫಿ ಬೆಳೆಗಾರರ ಪಾದಕ್ಕೆ 50,000 ಎಕರೆ ಫಲವತ್ತಾದ ಭೂಮಿ ಒಪ್ಪಿಸಲು ತುದಿಗಾಲಲ್ಲಿ ನಿಂತಿರುವ ಜನತಾ ಪಕ್ಷದ ಕಣ್ಣು ಮುಚ್ಚಿ ಹೋಗಿದೆಯೆ ?

—ಉರುಕೊಂದಪ್ಪ

R. N. 29681/76 PANCHAMA Fortnightly March, 88 Reg. No. B. G. W. 164

# ಈಗ ನೀವು ವರದಕ್ಷಿಣೆ ನಿರ್ಮೂಲನ ತ್ವರಿತಗೊಳಿಸಬಹುದು

## ವರದಕ್ಷಿಣೆ ನಿಷೇಧ (ತಿದ್ದುಪಡಿ) ಕಾಯಿದೆ, 1984 ಅಕ್ಟೋಬರ್ 2, 1985 ರಿಂದ ಜಾರಿಗೆ ಬಂದಿದೆ



ಹೌದು. ಈಗ ವರದಕ್ಷಿಣೆಯನ್ನು ನಿರ್ಮೂಲಗೊಳಿಸುವಂತಹ ಅವಕಾಶವನ್ನು ಕಲ್ಪಿಸಲಾಗಿದೆ. ಕಾಯಿದೆಯ ಹೊಸ ತಿದ್ದುಪಡಿ ಈಗ ಜಾರಿಗೆ ಬಂದಿದ. ಈ ಕಾನೂನು ಉಲ್ಲಂಘಿಸುವವರು ಯಾವುದೇ ಧರ್ಮಕ್ಕೆ ... ಅವರ ಮೇಲೆ ಪರಿಣಾಮಕಾರಿಯಾಗಿ ಕಾನೂನು ಕ್ರಮ ತೆಗೆದುಕೊಳ್ಳಬಹುದಾಗಿದೆ.

**ಈ ಹೊಸ ತಿದ್ದುಪಡಿಯ ವಿಶೇಷ ಅಂಶಗಳು**

ಮದುವೆಗೆ ಸಂಬಂಧಿಸಿದಂತೆ ವಧುವಿಗೆ ಅಥವಾ ವರನಿಗೆ ಅಥವಾ ಇತರ ಯಾವುದೇ ವ್ಯಕ್ತಿಗೆ ಕೊಡುವ ಅಥವಾ ಕೊಡುವುದಾಗಿ ಹೇಳುವ ಯಾವುದೇ ಆಸ್ತಿ ಅಥವಾ ಬೆಲೆಬಾಳುವ ವಸ್ತುಗಳನ್ನು ವರದಕ್ಷಿಣೆ ಎಂದು ಪರಿಗಣಿಸಲಾಗುವುದು.

ವಧು ಅಥವಾ ವರನ ತಂದೆ ತಾಯಿಗಳು, ಸಂಬಂಧಿಕರು ಅಥವಾ ಪೋಷಕರು ನೇರವಾಗಿ ಅಥವಾ ಬೇರೆಯವರ ... ವರದಕ್ಷಿಣೆ ಬೇಕೆಂದು ಕೇಳುವುದು, ತೆಗೆದುಕೊಳ್ಳುವುದು, ಕೊಡುವುದು ಅಥವಾ ಒತ್ತಾಯಿಸುವುದು ಶಿಕ್ಷಾರ್ಹ ಅಪರಾಧ. ಈ ಅಪರಾಧಕ್ಕೆ ಆರು ತಿಂಗಳಿನಿಂದ ಎರಡು ವರ್ಷಗಳವರೆಗಿನ ಸೆರೆವಾಸ ಮತ್ತು 10,000 ರೂ.ಗಳವರೆಗೆ ಅಥವಾ ವರದಕ್ಷಿಣೆ ಬೆಲೆಯು ... ಯಾವುದ ಹೆಚ್ಚೋ ಅಷ್ಟು ಮೊತ್ತದವರೆಗಿನ ಜುಲ್ಮಾನೆ.

ವಿವಾಹದ ಸಂದರ್ಭದಲ್ಲಿ ವಧು ಹಾಗೂ ವರನಿಗೆ ನೀಡುವ ಉಡುಗೊರೆಗಳು ಯಾವುದೇ ಬಗೆಯ ಒತ್ತಾಯವಿಲ್ಲದೆ, ಸಾಂಪ್ರದಾಯಿಕ ರೀತಿಯಲ್ಲಿದ್ದು ನಿಬಂಧನೆಗಳಂತೆ ಪಟ್ಟಿ ಮಾಡಿದ್ದಲ್ಲಿ ಶಿಕ್ಷೆ ಇಲ್ಲ. ಲಿಖಿತ ರೂಪದ ಈ ಪಟ್ಟಿಯನ್ನು ವಧು-ವರ ಇಬ್ಬರೂ ಇಟ್ಟುಕೊಳ್ಳಬೇಕು. ಪಟ್ಟಿಯಲ್ಲಿ ಉಡುಗೊರೆಯ ವಿವರಣೆ, ಅದರ ಅಂದಾಜು ಬೆಲೆ, ಉಡುಗೊರೆ ನೀಡಿದ ವ್ಯಕ್ತಿಯ ಹೆಸರು, ಆ ವ್ಯಕ್ತಿಗೂ ವಧು-ವರರಿಗಿರುವ ಸಂಬಂಧ ಮುಂತಾದವುಗಳನ್ನು ಬರೆಯಬೇಕು. ... ಓದಿ ಹೇಳಿದ ನಂತರ ಹೆಬ್ಬೆಟ್ಟು ಗುರುತನ್ನು ಹಾಕಬೇಕು.

ಉಡುಗೊರೆ ತೆಗೆದುಕೊಂಡ ವಸ್ತುಗಳ ಇಂತಹ ಪಟ್ಟಿಯನ್ನು ಬರೆಯದಿದ್ದಲ್ಲಿ ಅಥವಾ ಮದುವೆಯ ಸಂದರ್ಭದಲ್ಲಿ ತೆಗೆದುಕೊಳ್ಳಲಾದ ಯಾವುದಾದರೂ ಉಡುಗೊರೆಯನ್ನು ಆ ಪಟ್ಟಿಯಲ್ಲಿ ಸೇರಿಸದಿದ್ದಲ್ಲಿ ಉಡುಗೊರೆ ಅಥವಾ ಉಡುಗೊರೆಗಳನ್ನು ಪಡೆಯುವ ಮತ್ತು ನೀಡುವ ವ್ಯಕ್ತಿ ಹಾಗೂ ವ್ಯಕ್ತಿಗಳನ್ನು ಶಿಕ್ಷೆಗೆ ಗುರಿಪಡಿಸಬಹುದಾಗಿದೆ.

ಒಬ್ಬ ಮಹಿಳೆಯ ಮದುವೆಯಲ್ಲಿ ನೀಡಲಾದ ವರದಕ್ಷಿಣೆಯನ್ನು ಆ ಮಹಿಳೆಯಲ್ಲದೆ ಬೇರೆ ಯಾರಾದರೂ ಸ್ವೀಕರಿಸಿದ್ದರೆ, ಅವರು ... ಒಳಗಾಗಿ ಆ ಮಹಿಳೆಗೇ ಹಿಂತಿರುಗಿಸಬೇಕು. ಹಾಗೆ ತಲುಪಿಸದಿದ್ದಲ್ಲಿ ಆ ವ್ಯಕ್ತಿ ಆರು ತಿಂಗಳಿಂದ ಎರಡು ವರ್ಷದವರೆಗೆ ಸೆರೆವಾಸ ಅಥವಾ 10,000 ರೂ. ದಂಡ ಇಲ್ಲವೇ, ಎರಡೂ ಶಿಕ್ಷೆಗಳಿಗೆ ಒಳಗಾಗುತ್ತಾನೆ.

ಈ ನಿಯಮಗಳನ್ನು ಮೀರಿದ ಸಂದರ್ಭಗಳಲ್ಲಿ ನೊಂದ ವ್ಯಕ್ತಿ, ಆ ವ್ಯಕ್ತಿಯ ತಂದೆ ತಾಯಿ, ಆ ವ್ಯಕ್ತಿಯ ಸಂಬಂಧಿಕರು ಅಥವಾ ಸರ್ಕಾರದಿಂದ ಮಾನ್ಯತೆ ಹೊಂದಿದ ಸಮಾಜ ಕಲ್ಯಾಣ ಸಂಸ್ಥೆ — ಇವರಲ್ಲಿ ಯಾರು ಬೇಕಾದರೂ ದೂರು ಸಲ್ಲಿಸಬಹುದು. ವರದಕ್ಷಿಣೆಯ ನಿರ್ಮೂಲನಕ್ಕಾಗಿ ಧಾರ್ಮಿಕ ನಾಯಕರ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಬೆಂಬಲವನ್ನು ಸರ್ಕಾರ ಬಯಸುತ್ತದೆ. ... ನೊಂದ ವ್ಯಕ್ತಿಗೆ ಪೋಲೀಸರು ರಕ್ಷಣೆ ನೀಡುವರು.

**ಕರ್ನಾಟಕ ಕಾನೂನು ನೆರವು ಮಂಡಲಿ ಉಚಿತ ಕಾನೂನು ನೆರವನ್ನೂ ನೀಡುವುದು**
**ನೀವು ಮನಸ್ಸು ಮಾಡಿದರೆ ಈಗ ವರದಕ್ಷಿಣೆ ಪಿಡುಗನ್ನು ನಿರ್ಮೂಲಗೊಳಿಸಬಹುದು**

'ಕರ್ನಾಟಕ ವಾರ್ತೆ'

ಸಂಪಾದಕ: ಕೆ. ರಾಮಯ್ಯ, ಪ್ರಕಾಶಕ ಮುದ್ರಕ: ರಂಗಸ್ವಾಮಿ ಬೆಳ್ಳಿದಮಯ, 2ಬಿ ಮಹದೇಶ್ವರ ನಿಲಯ, 2ನೇ ಕ್ರಾಸ್, 2ನೇ ಮೇನ್, ಹೊಸಳ್ಳಿ, ಬೆಂಗಳೂರು-40
ಮುದ್ರಣ: ಸಂದೀಪ್ ಪ್ರಿಂಟರ್ಸ್, 718 ಮಹಡಿ, 6ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು – 40.